

# ಸಿದ್ಧಗಂಗಾ



ಜುಲೈ ೨೦೦೧

ಮೇ ೧೫ರಂದು ಸಕಲೇಶಪುರ ತಾಲ್ಲೂಕು ರಾಯರ ಕೊಪ್ಪಲಿನಲ್ಲಿ ನಡೆದ ಬಸವ ಜಯಂತಿ ಸಮಾರಂಭವನ್ನು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಎಸಳೂರು ತೆಂಕಲಗೂಡು ಮಠದ ಶ್ರೀ ಶ್ರೀ ಚನ್ನಮಲ್ಲಿಕಾರ್ಜುನ ಸ್ವಾಮಿಗಳು, ಕಲ್ಮಠದ ಶ್ರೀ ಶ್ರೀ ಮಹಾಂತ ಸ್ವಾಮಿಗಳು, ಕಿರಿಕೊಡ್ಲಿಮಠದ ಶ್ರೀ ಶ್ರೀ ಸದಾಶಿವ ಸ್ವಾಮಿಗಳು ಹಾಗೂ ಆದಿಚುಂಚನಗಿರಿ ಶಾಖಾ ಮಠದ ಶ್ರೀ ಶ್ರೀ ಪ್ರಣವಾನಂದ ಸ್ವಾಮಿಗಳವರನ್ನು ಕಾಣಬಹುದು.

ತುಮಕೂರು ನಗರದಲ್ಲಿ ನೂತನವಾಗಿ ನಿರ್ಮಿಸಿರುವ
ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ವಸತಿಗೃಹ

**ಹೋಟೆಲ್ ಶ್ರೀ ವಿಘ್ನೇಶ್ವರ ಕಂಫರ್ಟ್**

ಸರ್ಕಾರಿ ಕಾಲೇಜು ಮುಂಭಾಗ, ಬಿ.ಹೆಚ್. ರಸ್ತೆ., ತುಮಕೂರು-1.
ದೂರವಾಣಿ : 255883, 257770, 257774, 257772



- ಮೂರು ವಿವಿಧ ದರ್ಜೆಯ 50 ಸುಸಜ್ಜಿತ ಕೊಠಡಿಗಳು
- ವಿಶೇಷ ವ್ಯವಸ್ಥೆಯ ಹವಾನಿಯಂತ್ರಿತ ಕೊಠಡಿಗಳು
- ಹವಾನಿಯಂತ್ರಿತ ಮಿನಿ ಕಾನ್ಫರೆನ್ಸ್ ಹಾಲ್
- ವಿಶಾಲವಾದ ಪಾರ್ಕಿಂಗ್ ವ್ಯವಸ್ಥೆ
- ಪ್ರತಿ ಕೊಠಡಿಗೆ ಟಿ.ವಿ., ಟೆಲಿಫೋನ್ ಸಂಪರ್ಕ
- ಹವಾನಿಯಂತ್ರಿತ ವಿ.ಐ.ಪಿ. ರೂಂ.
- ಶಾಶ್ವತ ವಿದ್ಯುತ್ ವ್ಯವಸ್ಥೆ
- ಪರಿಣತ ಸಿಬ್ಬಂದಿಯ ವಿನೀತ ಸೇವೆ

ಲಿಫ್ಟ್ ಸೌಲಭ್ಯವಿದೆ

ಹವಾನಿಯಂತ್ರಿತ ಉಪಹಾರ ಗೃಹ : **"ವಿಘ್ನೇಶ್ವರ ಉಪಹಾರ"**

ಮಾಲೀಕರು : ಎಸ್.ಜಿ. ಚಂದ್ರಮೌಳಿ, ಗ್ರಾನೈಟ್ ಉದ್ಯಮಿ.



ಮುಖಪುಟ
ರಾಯರ ಕೊಪ್ಪಲಿನಲ್ಲಿ ನಡೆದ
ಬಸವಜಯಂತಿ ಕಾರ್ಯಕ್ರಮದ
ಉದ್ಘಾಟನಾ ಸಮಾರಂಭ

ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ– ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೪
ದೂರವಾಣಿ : ೩೩೪೪೦೮೭

ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೭ | ಜುಲೈ ೨೦೦೧ | ಸಂಚಿಕೆ : ೭

## ಒಳಪುಟಗಳಲ್ಲಿ..........

೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ಜಯಂತಿಗಳು – ಗೊ.ರು. ಚನ್ನಬಸಪ್ಪ
೬. ವಚನಗಳ ವಿಶ್ಲೇಷಣೆ
೭. ಶರಣ ಸಾಹಿತ್ಯದ ಪ್ರಸ್ತುತತೆ – ಡಾ ॥ ಜಿ.ಎಸ್. ಶಿವರುದ್ರಪ್ಪ
೧೦. ಸಾಮಾನ್ಯ ಜ್ಞಾನ
೧೧. ಅಲ್ಲಮಪ್ರಭು – ಭಾಗ ೨ – ಲಿಂ. ಡಾ ॥ ಎಚ್. ತಿಪ್ಪೇರುದ್ರಸ್ವಾಮಿ
೧೭. ಪೊಲೀಸರು ಎಂತಹ ದೂರುಗಳನ್ನು ಕೈಗೆತ್ತಿಕೊಳ್ಳಬಹುದು – ಡಾ. ಡಿ.ವಿ. ಗುರುಪ್ರಸಾದ್
೧೯. ಜನಪದರ ದೃಷ್ಟಿಯಲ್ಲಿ ಕಾಯಕ ಮತ್ತು ದಾಸೋಹ – ಎಚ್.ಎಸ್. ಸಿದ್ಧಗಂಗಪ್ಪ
೨೩. ವಿಷ್ಣುಕ್ರಾಂತಿ ಸೊಪ್ಪು – ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು
೨೬. ಸಮಾರಂಭ
೨೮. ಕ್ಷೇತ್ರವಾರ್ತೆ

ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/- |
| ಆಜೀವ ಸದಸ್ಯತ್ವ | ರೂ. ೫೦೦/- |
| ಬಿಡಿ ಪ್ರತಿ | ರೂ. ೧೦.೦೦ |



# ಸಮಸ್ಯೆಯಾಗಿರುವ ಶಿಕ್ಷಣ ವ್ಯವಸ್ಥೆ.......

'ಹುತ್ತವ ಬಡಿದೊಡೆ ಹಾವು ಸಾವುದೇ ಅಯ್ಯಾ?' ಬಸವಣ್ಣನವರ ವಚನದ ಒಂದು ಸಾಲು ಇದು. ಬೆಳಕಿನ ಸಾಲು. ಅರ್ಥೈಸಿದಷ್ಟೂ, ಪರಿಭಾವಿಸಿದಷ್ಟೂ ಬೆಳಕನ್ನು ಚೆಲ್ಲುವ ಸಾಲು. ಇತ್ತೀಚೆಗೆ ಶಿಕ್ಷಣ ಕ್ಷೇತ್ರದಲ್ಲಿ ಮಾಡುತ್ತಿರುವ ಬದಲಾವಣೆಗಳನ್ನು ನೋಡಿದಾಗ ಈ ಸಾವಿಲ್ಲದ ಸಾಲು ನೆನಪಾಗುತ್ತದೆ. ಸ್ವಾತಂತ್ರ್ಯ ಬಂದು ಐವತ್ನಾರು ವರ್ಷಗಳು ಸಂದು ಹೋದರೂ ಈ ನೆಲಕ್ಕೆ ತಕ್ಕಂಥ ಶಿಕ್ಷಣ ವ್ಯವಸ್ಥೆಯನ್ನು ತರಲಾರದೆ ತೊಳಲಾಡುತ್ತಿದ್ದೇವೆ. ಸರ್ಕಾರಗಳು ಬದಲಾದ ಹಾಗೆಲ್ಲ; ಸಚಿವರು ಬದಲಾದ ಹಾಗೆಲ್ಲ ಶಿಕ್ಷಣ ವ್ಯವಸ್ಥೆಯನ್ನು ಬದಲಾಯಿಸುತ್ತಲೇ ನಡೆದಿದ್ದೇವೆ. ವ್ಯವಸ್ಥೆಯ ಬದಲಾವಣೆಗಾಗಿ ಸಮಿತಿಗಳನ್ನು ನೇಮಕ ಮಾಡುತ್ತ ಬಂದಿದ್ದೇವೆ. ಸಮಿತಿಗಳು ನೀಡಿದ ವರದಿಯನ್ನು ಪ್ರಕಟಿಸುತ್ತ, ಪರಿಶೀಲಿಸುತ್ತ, ಪ್ರಯೋಗಗೊಳಿಸುತ್ತ ಹೆಜ್ಜೆ ಹಾಕಿದ್ದೇವೆ. ಇಲಾಖೆಯನ್ನು ವಿಸ್ತರಿಸುತ್ತ, ಅಧಿಕಾರಿ ವರ್ಗದವರನ್ನು, ಸಿಬ್ಬಂದಿ ಸಮೂಹವನ್ನು, ಶಿಕ್ಷಕರನ್ನು ನೇಮಿಸುತ್ತಲಿದ್ದೇವೆ. ಪಠ್ಯಪುಸ್ತಗಳ ಪ್ರಕಟಣೆಯನ್ನು ಮಾಡುತ್ತಲಿದ್ದೇವೆ. ದೇಶ ವಿದೇಶಗಳಿಗೆ ಹೋಗಿಬಂದು ಅಲ್ಲಿನ ವ್ಯವಸ್ಥೆಯನ್ನು ಇಲ್ಲಿಯೂ ತರಲು ಸಾಹಸ ಕೈಗೊಂಡಿದ್ದೇವೆ. ಇತ್ತೀಚೆಗಂತೂ ಕಂಪ್ಯೂಟರ್ ಸನ್ನಿಗೊಳಗಾಗುವಲ್ಲಿ ಎಲ್ಲಿಲ್ಲದ ಉತ್ಸಾಹ ನಮ್ಮದಾಗಿದೆ. ಮಾಹಿತಿತಂತ್ರಜ್ಞಾನವೆಂಬ ಮಾಯಾಸುರನ ಕಂಬಂಧಬಾಹುವಿಗೆ ಸಿಕ್ಕಿ ಹೋಗಿದ್ದೇವೆ. ಹತ್ತು-ಹನ್ನೆರಡು ವರ್ಷದ ಎಳೆಯ ಕಂದಮ್ಮಗಳಿಗೂ ಕಂಪ್ಯೂಟರ್ ಕಲಿಕೆಯ ಗೀಳು ಹಚ್ಚಿಸಿದ್ದೇವೆ. ಇದೂ ಸಾಲದೆಂಬಂತೆ ಶಾಲೆಯ ವೇಳೆ ಬದಲಾವಣೆ, ಸಮುದಾಯದತ್ತ ಸಭೆಗಳು ಎಂಬಂತಹ ಗೊಂದಲ ಸೃಷ್ಟಿಸಿದ್ದೇವೆ. ಇಂಗ್ಲೀಷ್ ಮಾಧ್ಯಮದ ಭೂತದಿಂದ ಪಾರಾಗದೆ ಕನಸು ಕಾಣುತ್ತಿದ್ದೇವೆ. ಮಾತೃಭಾಷಾ ಮಾಧ್ಯಮದಲ್ಲಿ ಕಲಿಯುವ ಮಕ್ಕಳು ಎರಡನೆ ದರ್ಜೆಯ ಪ್ರಜೆಗಳು ಎಂಬ ಭ್ರಮೆಯಾವರಿಸಿದೆ. ಟಿ.ವಿ. ಮಾಧ್ಯಮದಲ್ಲಿ 'ಕೌನ್ ಬನೇಗ ಕರೋಡ್ ಪತಿ' ಎಂಬ ಕಾರ್ಯಕ್ರಮವೊಂದು ಪ್ರದರ್ಶಿತವಾಗುತ್ತಿದೆ. ಅಲ್ಲಿ ಕೇಳುವ ಪ್ರಶ್ನೆಗಳಲ್ಲಿ, ನಮ್ಮ ಪರಂಪರೆಯ ರಾಷ್ಟ್ರೀಯ ಮಹಾಕಾವ್ಯಗಳ ಸಂಬಂಧಿಯಾದ ಪ್ರಶ್ನೆಗಳಿಗೆ ಉತ್ತರಿಸುವ ಯುವಕ-ಯುವತಿಯರ ಜ್ಞಾನದ ಅಭಾವಕ್ಕೆ ಕಾರಣ ನಮ್ಮ ಶಿಕ್ಷಣ ಪದ್ಧತಿಯಲ್ಲಿನ ದೋಷವೆಂಬುದನ್ನು ಅರಿಯದಾಗಿದ್ದೇವೆ. ಚಲನಚಿತ್ರಗಳಿಗೆ ಸಂಬಂಧಿಸಿದ, ಕ್ರಿಕೆಟ್ ಕ್ರೀಡೆಗೆ ಸಂಬಂಧಿಸಿಂದ ಪ್ರಶ್ನೆಗಳಿಗೆ ಕರಾರುವಕ್ಕಾಗಿ ಉತ್ತರಿಸುವ ಯುವಜನತೆ, ರಾಷ್ಟ್ರಾಭಿಮಾನದ ಪ್ರಶ್ನೆಗಳಿಗೆ ನಿರುತ್ತರರಾಗುತ್ತಿರುವುದು ಶಿಕ್ಷಣದ ನ್ಯೂನತೆಯಲ್ಲವೆ?

ಇತ್ತೀಚೆಗೆ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ಒಂದು ಪುಟ್ಟ ಪ್ರಯೋಗ ಮಾಡಿದೆ. ಅದೆಂದರೆ ಇಂಗ್ಲೀಷ್ ಭಾಷಾ ಕಲಿಕೆಯಲ್ಲಿ, ಕಲಿಸುವಿಕೆಯಲ್ಲಿ ಶಿಕ್ಷಕರು ಮಾಡುತ್ತಿರುವ ಸಾಮಾನ್ಯತಪ್ಪುಗಳನ್ನು ಸರಿಪಡಿಸಿಕೊಳ್ಳಲು ಪುಟ್ಟಕೈಪಿಡಿಯೊಂದನ್ನು ಪ್ರಕಟಿಸಿದೆ. ಅದರ ಹೆಸರು "A Guide to Avoid. Errors in Class Room Teaching of English" ಎಂದಿದೆ. ಸಂಸ್ಥೆಯ ಬೇರೆ ಬೇರೆ ಪ್ರೌಢಶಾಲೆಗಳಲ್ಲಿರುವ ಶಿಕ್ಷಕರಿಂದ ತರಿಸಿಕೊಂಡ ಇಂಗ್ಲೀಷ್ ವಾಕ್ಯಗಳಲ್ಲಿರುವ ದೋಷಗಳನ್ನು ಗಮನಿಸಿ, ಅವುಗಳ ಸರಿಯಾದ ರೂಪವನ್ನು ನೀಡಿರುವುದಾಗಿದೆ. ಈ ಕೈಪಿಡಿಯಲ್ಲಿ ಮೂರು ಭಾಗಗಳಿದ್ದು ಉಪಯುಕ್ತ ಜ್ಞಾನದ ಬೆಳಕನ್ನು ನೀಡುತ್ತದೆ. ಕಲಿಸುವವರಿಗೆ ಕಲಿಸುವ ಕಾಯಕಲ್ಪವಿದೆ.

ದೋಷ ಎಲ್ಲಿದೆ? ಎಂಬುದನ್ನು ಗುರುತಿಸಿ ಅದಕ್ಕೆ ಪರಿಹಾರ ಹುಡುಕಬೇಕಾಗಿದೆ. ಅದಕ್ಕಾಗಿ ಅಪಾರ ಸಂಖ್ಯೆಯ ಪ್ರಯತ್ನಗಳು ನಡೆದಿವೆ, ನಡೆಯುತ್ತಿವೆ, ಇಲ್ಲವೆಂದಲ್ಲ. ಆದರೆ ಪ್ರಯತ್ನ ದೋಷದ ತಾಯಿಬೇರು ಯಾವುದು? ಎಂಬುದನ್ನು ಹುಡುಕಬೇಕಾಗಿದೆ. ಈವರೆಗೆ ಈ ಅರ್ಧಶತಮಾನದುದ್ದಕ್ಕೆ ಶಿಕ್ಷಣ ಸುಧಾರಣೆಗಾಗಿ ನಡೆದಿರುವ ಪ್ರಯತ್ನಗಳೆಲ್ಲ ಸ್ತುತ್ಯರ್ಹವಾಗಿಯೇ? ನಡೆದಿವೆಯಾದರೂ ಸಂಕಲ್ಪಿಸಿದ ಫಲ ಶೂನ್ಯವೆಂಬುದನ್ನು ಒಪ್ಪಲೇಬೇಕಲ್ಲವೇ? ನಾವೆಲ್ಲ ಅಂದರೆ ಸರ್ಕಾರ, ಸಮಾಜ, ಶಿಕ್ಷಣತಜ್ಞರು, ಶಿಕ್ಷಣಾಭಿಮಾನಿಗಳು ಮುಕ್ತಮನಸ್ಸಿನಿಂದ ರಾಷ್ಟ್ರನಿರ್ಮಾಣಕ್ಕೆ ಅತ್ಯಗತ್ಯವಾದ ಸುಶಿಕ್ಷತ ಯುವ ಜನಾಂಗವನ್ನು ರೂಪಿಸಬೇಕಾದರೆ ಇನ್ನಾದರೂ ಹುತ್ತವ ಬಡಿವ ಕೆಲಸವನ್ನು ಬಿಟ್ಟು ಹಾವನ್ನು ಹಿಡಿವ ಮನಸ್ಸು ಮಾಡಬೇಕಾಗಿದೆ. ಅಭಿಮಾನವನ್ನು, ಪ್ರೀತಿಯನ್ನು ಬಿತ್ತುವ ಯೋಜನೆ ಬೇಕಾಗಿದೆ.

– ಸಂಪಾದಕ







# ವಿದ್ಯೆ ಕಲಿಯಲು ದೃಢವಾದ ಮನಸ್ಸು ಬೇಕು

ಕುಮಾರಿ ವಿಜಯಲಕ್ಷ್ಮಿ ಐ.ಎ.ಎಸ್. ಪರೀಕ್ಷೆಯಲ್ಲಿ ಇಡೀ ರಾಷ್ಟ್ರಕ್ಕೆ ಪ್ರಥಮ ರ್‍ಯಾಂಕ್‌ಗಳಿಸಿ ಕರ್ನಾಟಕಕ್ಕೆ ಗೌರವ ತಂದಿರುವುದು ಹೆಮ್ಮೆ ಎನಿಸುತ್ತದೆ. ಸಂತೋಷವನ್ನುಂಟುಮಾಡಿದೆ. ಪೊಲೀಸ್‌ವರಿಷ್ಠಾಧಿಕಾರಿಗಳಾದ ಶ್ರೀ ಶಂಕರ ಬಿದರಿಯವರ ಮಗಳಾದ ವಿಜಯಲಕ್ಷ್ಮಿಯ ಸಾಧನೆ ದೊಡ್ಡದು. ತನ್ನ ಯಶಸ್ಸಿಗೆ ತಂದೆ ತಾಯಿಗಳ ಪ್ರೋತ್ಸಾಹಗಳು ಕಾರಣವೆಂದು ಸುಸಂಸ್ಕೃತ ಮಾತುಗಳನ್ನು ವ್ಯಕ್ತಪಡಿಸಿರುವ ಅವರು ಪರೀಕ್ಷೆಯನ್ನೆದುರಿಸುವಾಗ ತಾವು ಅನುಸರಿಸುವ ಮಾರ್ಗವನ್ನು ಪತ್ರಿಕಾ ವರದಿಗಾರರ ಪ್ರಶ್ನೆಗಳಿಗೆ ಉತ್ತರಿಸುವಾಗ ಬಹಿರಂಗಗೊಳಿಸಿರುವುದನ್ನು ವಿದ್ಯಾರ್ಥಿಗಳಾದ ನೀವೆಲ್ಲ ಗಮನಿಸಬೇಕು. ಮನಸ್ಸನ್ನು ಸದಾ ಜಾಗೃತವಾಗಿಟ್ಟುಕೊಂಡು ನಿರಂತರ ಅಭ್ಯಾಸದಲ್ಲಿ ತೊಡಗಿದ್ದೇ ತಮ್ಮ ವಿಜಯಕ್ಕೆ ಕಾರಣವೆಂದಿದ್ದಾರೆ.

ಮನಸ್ಸು ಪವಿತ್ರವಾದುದು. ಅದನ್ನು ಜೋಪಾನಮಾಡಿಕೊಳ್ಳುವ ಕರ್ತವ್ಯ ನಮ್ಮದು. ಅದು ಚಂಚಲವಾಗದಂತೆ, ಅನ್ಯವಿಷಯಗಳತ್ತ ಹರಿದು ಹೋಗದಂತೆ, ದೀಪದ ಕುಡಿಯಂತೆ ಅಲುಗಾಡದಂತೆ, ಯಾವಾಗಲೂ ಎಚ್ಚರವಾಗಿದ್ದು ಕಾಪಾಡಿಕೊಳ್ಳಬೇಕು. ಮನಸ್ಸನ್ನು ಕುರಿತು ಜ್ಞಾನಿಗಳು ಬಹಳ ಚಿಂತನೆಮಾಡಿದ್ದಾರೆ. ಬಹುವಾಗಿ ಹೇಳಿದ್ದಾರೆ. ಮಂಗನಂತೆ ವರ್ತಿಸುವ ಮನಸ್ಸನ್ನು ಒಂದು ಕಡೆ ನಿಲ್ಲಿಸಬೇಕಾದರೆ ಪ್ರಯತ್ನ ಮಾಡಬೇಕು. ಒಮ್ಮೆಯಲ್ಲ ಹತ್ತಾರು ಸಾರಿ, ನೂರಾರು ಬಾರಿ, ಅಷ್ಟೇಕೆ ನಾವೆಷ್ಟು ಸಲ ಉಸಿರಾಡುತ್ತೇವೆಯೋ ಅಷ್ಟು ವೇಳೆ ಅದನ್ನು ಒಂದೆಡೆಗೆ ತಂದು ಕಟ್ಟಬೇಕಾದರೆ ಪ್ರಯತ್ನ ಸಾಗಬೇಕು.

ಮನಸ್ಸೇ ಬಂಧನಕ್ಕೂ ಮೋಕ್ಷಕ್ಕೂ ಕಾರಣವೆನ್ನುವ ಒಂದು ಸುಭಾಷಿತವಿದೆ. ಲೌಕಿಕ ಅಭ್ಯುದಯಕ್ಕಾಗಲಿ, ಅಲೌಕಿಕ ಸಿದ್ಧಿಗಾಗಲಿ ಮನಸ್ಸೇ ಕಾರಣವೆಂಬುದನ್ನು ಪೂರ್ವಿಕರು ತಮ್ಮ ಬಾಳಿನಲ್ಲಿ ತೋರಿಸಿಕೊಟ್ಟಿದ್ದಾರೆ. ಒಂದು ಸಣ್ಣ ಪ್ರಸಂಗವನ್ನು ಇಲ್ಲಿ ನೆನಪಿಸಬಹುದು. ಒಂದೂರಿನಲ್ಲಿ ಒಬ್ಬ ತರುಣನಿದ್ದ. ಅವನಿಗೆ ಮದುವೆಯಾಗಿತ್ತು. ಒಂದು ದಿನ ಆತನು ತನ್ನ ಪತ್ನಿಯ ಊರಿಗೆ ಹೋಗಿದ್ದ, ಕೆಲವು ದಿನ ಅಲ್ಲಿಯೇ ನಿಂತ. ಹಾಗಿರುವಾಗ ಅವನ ಊರಿನಿಂದ ಒಂದು ಕಾಗದ ಬಂತು. ಅದನ್ನು ಓದಲೆಂದು ಪತ್ನಿಯ ಮನೆಯವರು ಅವನ ಕೈಗೆ ಕೊಟ್ಟರು. ಅವನು ಅದನ್ನು ಕೈಯ್ಯಲ್ಲಿ ಹಿಡಿದುಕೊಂಡು ಅದನ್ನೇ ನೋಡುತ್ತ ಅಳುವುದಕ್ಕೆ ಪ್ರಾರಂಭಿಸಿದ. ಬಂಧು ಬಳಗದವರಿಗೆ ದುಃಖವಾಯಿತು. ಎಲ್ಲರೂ ಜೋರಾಗಿ ಅಳಲು ತೊಡಗಿದರು. ಸ್ವಲ್ಪ ಹೊತ್ತಾದ ಮೇಲೆ ಬಂಧುಗಳಲ್ಲೊಬ್ಬರು ಅವನನ್ನು ಕೇಳಿದರು. "ಯಾರು ತೀರಿಕೊಂಡರು ಹೇಳಿ" ಎಂದರು – ಅದಕ್ಕೆ ಆತನು ಹೇಳಿದ. "ಏನೋ ನನಗೆ ಗೊತ್ತಿಲ್ಲ, ನಾನು ಅತ್ತಿದ್ದು ಅದಕ್ಕಲ್ಲ, ನನಗೆ ಓದುವುದಕ್ಕೆ ಬರುವುದಿಲ್ಲ. ನಿಮ್ಮೆಲ್ಲರ ಮುಂದೆ ಆಗಿರುವ ಅವಮಾನಕ್ಕೆ ಅತ್ತೆ" ಎಂದುತ್ತರಿಸಿದ. ಎಲ್ಲರೂ ನಕ್ಕರು. ಅವನಿಗೆ ಮತ್ತಿಷ್ಟು ಅವಮಾನವಾಯಿತು. ಆಗ ದೃಢನಿರ್ಧಾರ ಮಾಡಿದ. ಮನಸ್ಸು ಮಾಡಿದ; ಏನಾದರಾಗಲಿ ತಾನು ವಿದ್ಯಾವಂತನಾಗಲೇಬೇಕೆಂದು ಹಟತೊಟ್ಟ, ಸರಿ ಪ್ರಸಿದ್ಧರಾಗಿದ ಗುರುಗಳೊಬ್ಬರ ಬಳಿಗೆ ಹೋದ. ಅವರಲ್ಲಿ ತನ್ನ ಆಸೆಯನ್ನು ವಿನಂತಿಸಿಕೊಂಡ. ಗುರುಗಳು ಅವನನ್ನು ಸೂಕ್ಷ್ಮವಾಗಿ ನೋಡಿದರು. ದಷ್ಟಪುಷ್ಟನಾಗಿ ಬೆಳೆದಿದ್ದ ಮದುವೆ ಬೇರೆ ಮಾಡಿಕೊಂಡಿದ್ದ. ಇಂಥವನ ಮನಸ್ಸು ವಿದ್ಯೆ ಕಲಿಯಬಹುದೇ ಎಂದು ಆಲೋಚಿಸಿದರು. ಇರಲಿ ಒಂದು ಪರೀಕ್ಷೆ ಮಾಡೋಣ ಎಂದುಕೊಂಡರು. ಅವನನ್ನು ಕುರಿತು ಹೇಳಿದರು. "ನೋಡಪ್ಪ ನಿನ್ನಿಂದ ಒಂದು ಕೆಲಸವಾಗಬೇಕಾಗಿದೆ. ನನ್ನ ಆತ್ಮೀಯರೊಬ್ಬರು ಪಕ್ಕದೂರಿನಲ್ಲಿದ್ದಾರೆ. ಅವರಿಗೆ ದೀಪಕ್ಕೆ ಎಣ್ಣೆ ಬೇಕೆಂದು ಹೇಳಿ ಕಳುಹಿಸಿದ್ದಾರೆ. ನೀನು ಈ ಎಣ್ಣೆ ಗಡಿಗೆಯನ್ನು ಅವರಿಗೆ ಕೊಟ್ಟು ಬರುವುದಾದರೆ ನಿನಗೆ ವಿದ್ಯೆಕಲಿಸುವುದನ್ನು ಅನಂತರ ಯೋಚನೆ ಮಾಡಬಹುದು" ಎಂದರು. ಕಲಿಯಬೇಕೆಂಬ ಆಸೆಯಿದ್ದ ಅವನು "ಆಗಲಿ" ಎಂದೊಪ್ಪಿಕೊಂಡನು. ಗುರುಗಳು ಕೊಟ್ಟ ಎಣ್ಣೆಗಡಿಗೆಯನ್ನು ಹೊತ್ತು ನಡೆದನು. ಹೊರಡುವ ಮುನ್ನ ಗುರುಗಳು ಒಂದು ಎಚ್ಚರಿಕೆಯ ಮಾತು ಹೇಳಿದರು. ಯಾವುದೇ ಕಾರಣಕ್ಕೂ ಗಡಿಗೆಯೊಳಗಿನ ಎಣ್ಣೆ ತುಳುಕದಂತೆ ತೆಗೆದುಕೊಂಡು ಹೋಗಬೇಕು ಎಂದು ಆದೇಶ ನೀಡಿದರು. ಅವನು ದಾರಿ ಹಿಡಿದು ನಡೆದ. ಗುರುಗಳು ಅವನ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಬೇರೊಂದು ವ್ಯವಸ್ಥೆಮಾಡಿದರು. ಅವನಿಗೆ ಗೊತ್ತಿಲ್ಲದಂತೆ ದಾರಿಮಧ್ಯದಲ್ಲಿ ದೊಡ್ಡದೊಂದು ಉತ್ಸವ ಬರುವಂತೆ ಏರ್ಪಾಡು ಮಾಡಿದರು. ಉತ್ಸವವೆಂದ ಮೇಲೆ ಕೇಳಬೇಕೆ? ಸದ್ದುಗದ್ದಲ, ಜನಜಂಗುಳಿ, ವಿವಿಧ ಆಕರ್ಷಣೆಗಳು, ಆಮೋದ ಪ್ರಮೋದಗಳು ಸಡಗರ ಸಂಭ್ರಮದ ಜಾತ್ರೆ. ಆ ಎಲ್ಲದರ ಮಧ್ಯೆ ಈ ತರುಣ ಹೋಗಬೇಕು. ಎಚ್ಚರದಿಂದ ಹೋಗಬೇಕು. ಎಣ್ಣೆ ತುಳುಕಬಾರದು. ಅವನು ಹಾಗೆಯೇ ನಡೆದ. ಮನಸ್ಸೆಲ್ಲ ಎಣ್ಣೆ ಗಡಿಗೆಯ ಮೇಲೆ. ದಾರಿಯಲ್ಲಿ ಎದುರಾದ ಉತ್ಸವ ಅವನ ಕಣ್ಣಿಗೆ ಕಂಡರೂ ಅದರತ್ತ ಗಮನವಿಲ್ಲ. ಗುರುಗಳು ಹೇಳಿದಂತೆ ಅವರ ಆತ್ಮೀಯರಿಗೆ ಎಣ್ಣೆ ಗಡಿಗೆಯನ್ನು ತಲುಪಿಸಿದ. ಅವರೊಂದು ಪತ್ರ ಕೊಟ್ಟರು. "ಗಡಿಗೆಯಲ್ಲಿದ್ದ ಎಣ್ಣೆ ಎಳ್ಳಷ್ಟೂ ತುಳುಕದಂತೆ ತಂದುಕೊಟ್ಟಿದ್ದಾನೆ. ಇಂಥ ವಿದ್ಯಾರ್ಥಿ ಸಿಕ್ಕುವುದು ಗುರುವಿನ ಪುಣ್ಯ. ಇವನ ಮನಸ್ಸು ಶ್ರದ್ಧೆಯುಳ್ಳದ್ದಾಗಿದೆ. ವಿದ್ಯಾರ್ಥಿಯನ್ನು ಸ್ವೀಕರಿಸಬಹುದು" ಎಂದು ಅದರಲ್ಲಿ ಬರೆದಿತ್ತು. ಅದನ್ನು ನೋಡಿ ಗುರುಗಳು ಆ ತರುಣನಿಗೆ ವಿದ್ಯೆಕಲಿಸಲು ಸಂತೋಷದಿಂದ ಒಪ್ಪಿದರು.

ಕಥೆಯ ನೀತಿಯಷ್ಟೇ ವಿದ್ಯೆಕಲಿಯಲು ಮನಸ್ಸು ಮುಖ್ಯ "ವಿದ್ಯಾತುರಣಾಂ ನನಿದ್ರಾ, ನಸುಖಾ" ಎಂದಿದೆ ಸುಭಾಷಿತ. ವಿದ್ಯೆ ಕಲಿಯಬಲ್ಲವನಿಗೆ ನಿದ್ರೆ, ಸುಖಗಳು ರುಚಿಸುವುದಿಲ್ಲ.

ನೀವೆಲ್ಲ ಬೇರೆ ಬೇರೆ ಊರುಗಳಿಂದ ಬಂದಿದ್ದೀರಿ. ದೂರದ ಬೀದರ್, ಬಿಜಾಪುರ, ಗುಲ್ಬರ್ಗ, ಬಳ್ಳಾರಿಗಳಿಂದ ಬಂದಿದ್ದೀರಿ.

ನಿಮ್ಮ ಗುರಿಯೇನು? ಓದುವುದು, ನಿದ್ದೆಯಲ್ಲ, ಟಿ.ವಿ. ನೋಡುವುದಿಲ್ಲ, ಕದ್ದು ಸಿನಿಮಾಕ್ಕೆ ಹೋಗುವುದಿಲ್ಲ. ಸೋಮಾರಿಗಳಾಗಿ ಕಾಲಕಲೆಯುವುದಲ್ಲ. ನಿಮ್ಮ ತಂದೆ ತಾಯಿಗಳ ಪೋಷಕರ ಶ್ರಮವನ್ನು ಆಸೆಯನ್ನು ಸಾರ್ಥಕಗೊಳಿಸುವುದರತ್ತ ಇರಬೇಕು. ನಿಮಗಾಗಿ ಶ್ರೀಮಠ ಲಕ್ಷಾಂತರ ರೂ.ಗಳನ್ನು ಖರ್ಚುಮಾಡುತ್ತಿದೆ. ನೀವಿದನ್ನು ಅರ್ಥಮಾಡಿಕೊಳ್ಳಬೇಕು. ಸಾವಿರಾರು ವಿದ್ಯಾರ್ಥಿಗಳಿದ್ದೀರಿ. ಆದರೆ ಪರೀಕ್ಷೆಗಳಲ್ಲಿ ಕುಮಾರಿ ವಿಜಯಲಕ್ಷ್ಮಿಯಂತೆ ಒಬ್ಬರಾದರೂ ಒಂದು ರ್‍ಯಾಂಕು ಗಳಿಸುತ್ತಿಲ್ಲ. ಗಂಭೀರವಾಗಿ ಯೋಚನೆಮಾಡಿ. ನಿಮಗೆ ಯಾವ ಕೊರತೆ ಇದೆ. ಇಲ್ಲಿ ಸಕಲ ಸೌಲಭ್ಯಗಳಿದ್ದೂ ಫೇಲಾಗುವುದೆಂದರೆ ಎಂತ ನೋವಿನ ವಿಚಾರ. ನಿಮ್ಮ ಶಕ್ತಿಯನ್ನು ವಿಕಾಸಮಾಡಿಕೊಳ್ಳಲು ನಿಮಗೀಗ ಸುಸಂಧಿ. ಮನಸ್ಸನ್ನು ನಿಶ್ಚಲಮಾಡಿಕೊಳ್ಳಿ. ಜೀವನವನ್ನು ಹಸನು ಮಾಡಿಕೊಳ್ಳಲು ದೃಢನಿರ್ಣಯ ನಿಮ್ಮದಾಗಲಿ.

(೧೪-೬-೨೦೦೧ರ ಪ್ರಾರ್ಥನಾ ಸಭೆಯಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಆಚಾರಲಿಂಗಸಂಬಂಧಿಯಾದ ಬಳಿಕ*
*ಪಂಚಭೂತದ ಪ್ರಕೃತಿಕಾಯ ಅಳಿದಿರಬೇಕಯ್ಯಾ*
*ಗುರುಲಿಂಗ ಸಂಬಂಧಿಯಾದ ಬಳಿಕ*
*ಪಂಚವಿಷಯಂಗಳ ಸಂಚವಂಚನೆಯ ಕೆಡಿಸಿರಬೇಕಯ್ಯಾ*

*ಶಿವಲಿಂಗ ಸಂಬಂಧಿಯಾದ ಬಳಿಕ*
*ಮಾಯಾ ಕರ್ಮೇಂದ್ರಿಯ ಕುಹಕವಾಳಿದಿರಬೇಕಯ್ಯಾ*
*ಜಂಗಮಲಿಂಗ ಸಂಬಧಿಯಾದ ಬಳಿಕ*
*ಬುದ್ಧೀಂದ್ರೀಯಂಗಳು ಶುದ್ಧಿಯಿಂದಿರಬೇಕಯ್ಯಾ*

*ಪ್ರಸಾದ ಲಿಂಗ ಸಂಬಂಧಿಯಾದ ಬಳಿಕ*
*ಅಂತಃಕರಣ ಚತುಷ್ಟಯ ಸತ್ವರಜತಮಂಗಳ*
*ಪ್ರವರ್ತನೆಯ ಮೆಟ್ಟಿ ಮುರಿದಿರಬೇಕಯ್ಯಾ*

*ಮಹಾಲಿಂಗ ಸಂಬಂಧಿಯಾದ ಬಳಿಕ*
*ಷಡುವರ್ಣಧಾತುವನಳಿದು*
*ವಸ್ತು ರೂಪಾಗಿ ಶುದ್ಧ ನಿರ್ಮಲನಾಗಿ*
*ತನುತ್ರಯ ಜೀವತ್ರಯ ಅವಸ್ಥಾತ್ರಯ ಪ್ರಕೃತಿತ್ರಯ*

*ಇಂತೀ ನಾನಾ ವಿಧಂಗಳೆಲ್ಲವನು ಒಂದು ಮಾಡಿ*
*ನಾನು ನೀನೆಂಬುಭಯವಿಲ್ಲದೆ*
*ಜೀವಪರಮೈಕ್ಯವಪ್ಪ ಪರಾಪರ ತಾನಾಗಿರಬೇಕಯ್ಯಾ*
*ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೆ !*

ಈ ವಚನದಲ್ಲಿ ಅಂಗನು, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂಬ ಆರು ಲಿಂಗಗಳಲ್ಲಿ ಕ್ರಮವಾಗಿ ಕೂಡಿದಾಗ ಆಗುವ ಪರಿಣಾಮವನ್ನು ನಿರೂಪಿಸಲಾಗಿದೆ.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ–
ಶ್ರೀ ತೋಂ.ಸಿ.ಕೈಂ.ಸೇ. ಸಂಘ, ಎಡೆಯೂರು–ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಆಭರಣಾದಭರಣವಾಗಿಹ ಪುಣ್ಯವೆ
ಶಿವಸುಂದರಪಾವನರೂಪವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಶಿವ ಪುಣ್ಯವೆ ನೆನೆದವರ ಮನದಿರುವೆ
ಮನತುಂಬಿಬೆಳಕಾಗಿ ನಡೆಸಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶ್ರೀ ಗುರುವೆನಿನ್ನ ಹೊರತು ನಾನ್ಯಾರನಂಬಿಲ್ಲ
'ಕರುಣಾಳು ಓ ಬೆಳಕೆ ನಡೆಸಿರುವೆ'। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿದ್ದೆಗಣ್ಣಲಿ ಕಂಡೆ ನಿನ್ನ ಶ್ರೀಪಾದವ
ಎದ್ದು ಕೈಮುಗಿದೆ ನಿನ್ನೆಡೆಗೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಟ್ಟ ನಡುರಾತ್ರೀಲಿ ಎದ್ದು ಪೂಜೆಗೆ ನಡೆವ
ನಿಷ್ಠೆ ನಿಯಮಗಳ ಮಂಗಳವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣು ಶರಣೆಂಬೆನು ಹರಣ ಹಾರುವತನಕ
ಕರುಣೆ ಕಾರುಣ್ಯದ ಶ್ರೀ ಗಿರಿಯೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ನಿನ್ನ ನೆನೆದಾರೆ ಸರಸರನೆ ಪದಬಹವು
ಎದೆತುಂಬಿ ತುಳುಕಿ ಹೊರಬಹವು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೊತ್ತುಮೂಡುವ ಮುಂಚೆ ಹೂವು ಅರಳುವ ಮುಂಚೆ
ನಿತ್ಯ ನಿನ್ನ ನೆನೆದು ಸುಖಿಯಾದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ನೀಬರುವಾಗ ಹಾದ್ಯೆಲ್ಲ ಘಮಘಮ
ಅಂಗಳವೆಲ್ಲ ಸಿರಿಗಂಧ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಹೊತ್ತುಮುಳುಗಿದರೇನ ಕತ್ತಲಾದರೇನ''
ಅಪ್ಪ ನಿನ್ನ ಕಾಯಕ ನಡೆದಿದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಜಯಂತಿಗಳು

– ಗೊ.ರು. ಚನ್ನಬಸಪ್ಪ
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು–೮೨

ಮೊನ್ನೆ ಮೊನ್ನೆಯವರೆಗೆ 'ಬಸವ ಜಯಂತಿ' ಆಚರಿಸಿದ್ದೇವೆ. ಇನ್ನೂ ಕೆಲವು ಕಡೆ ಆಚರಿಸುತ್ತಲೂ ಇದ್ದಾರೆ. ಅದೊಂದು ಮತಾಚರಣೆಯ ಸ್ಥಿತಿಯಾಗಿದೆ. ಆಚರಣೆಗೆ 'ಬಸವಣ್ಣ'ನ ಭಾವಿಚಿತ್ರ ಇಟ್ಟು ಪೂಜಿಸುತ್ತೇವೆ. ಆದರೆ ಅವನ ತತ್ತ್ವಾಚರಣೆಯ ಸತ್ಯಜ್ಞಾನ ನಮಗಿಲ್ಲ. ಅವನ ಭಾವಚಿತ್ರದ ಕಣ್ಣಿನಲ್ಲಿ ಸೂಸುವ ಅರಿವಿನ ಬೆಳಕು ನಮಗೆ ಅರ್ಥವಾಗಿಲ್ಲ. ಅವನನ್ನು ಹಾಡಿ ಹೊಗಳುವ ನುಡಿ ಜಾಣ್ಮೆಗೇನೂ ನಮ್ಮಲ್ಲಿ ಕೊರತೆಯಿಲ್ಲ.

ಈ ಸನ್ನಿವೇಶದಲ್ಲಿ ನನ್ನ ಇಂದಿನ ಚಿಂತನೆಗೆ ಅಣ್ಣ ಬಸವಣ್ಣನ ಮಾತುಗಳನ್ನೇ ಬಳಸಿಕೊಂಡಿದ್ದೇನೆ. ನಮ್ಮ ಬದುಕಿನ ವ್ಯವಹಾರಗಳು ಹೇಗೆ ನಡೆಯುತ್ತಿವೆ? *'ತುದಿ ನಾಲಗೆ ಕಸ್ತೂರಿ, ಹೃದಯ ಕತ್ತರಿ'*. ನಾವು ಆತ್ಮ ನಿರೀಕ್ಷೆ ಮಾಡಿಕೊಳ್ಳಬೇಕು. ನೀರ ಗುಳ್ಳೆಗೆ ಕಬ್ಬಿಣದ ಕಟ್ಟುಕೊಟ್ಟು ರಕ್ಷಣೆ ಮಾಡುವ ನಮ್ಮ ಅಬ್ಬರ ಕಂಡು ಅಣ್ಣನ ಭಾವಚಿತ್ರ ನಿಬ್ಬೆರಗಾಗಿರಬೇಕು.

ನಾವು ಒಂದು ದೊಡ್ಡ ಪರಂಪರೆಯ ವಾರಸುದಾರರೆಂದು ಹೇಳಿಕೊಳ್ಳುತ್ತೇವೆ. ಆದರೆ ತನುಮನಧನ ಹಿಂದಿಟ್ಟುಕೊಂಡು, ಮಾತಿನ ಬವಣೆಯ ಮುಂದಿಟ್ಟುಕೊಂಡು ನಡೆಯುತ್ತೇವೆ. ಹಸಿದು ಬಂದ ಗಂಡಂಗೆ ಉಣಲಿಕ್ಕದೆ, ಬಡವಾದನೆಂದು ಮರುಗುತ್ತೇವೆ. ಇವ ನಮ್ಮವ, ಇವ ನಮ್ಮವ ಎನ್ನುವ ಸಂಸ್ಕೃತಿ ನಮ್ಮದು ಎಂದು ಹೇಳುತ್ತಲೇ ನಮಗೆ ನಾವೇ ದೂರಿಕೊಳ್ಳುತ್ತೇವೆ, ನಮ್ಮನ್ನು ನಾವೇ ಮಾರಿಕೊಳ್ಳುತ್ತೇವೆ. ಮಣ್ಣ ಬೊಂಬೆಯನ್ನು ತೊಳೆದು ಕೆಸರು ಕಳೆಯುವ ಕೆಲಸ ನಮ್ಮದಾಗಿದೆ.

ನಮಗೆ ನಾವೇ ಮುನಿಯುತ್ತಿದ್ದೇವೆ. ಮನೆಯೊಳಗಣ ಕಿಚ್ಚು ಮನೆಯ ಸುಡುವುದೆಂಬ ಪರಿವೆಯೂ ನಮಗಿಲ್ಲ. ಭಕ್ತಿಯಿಲ್ಲದ ಬಡವರಾಗಿದ್ದೇವೆ; ಮತಿಯಿಲ್ಲದ ಮರುಳರಾಗಿದ್ದೇವೆ; ಮನಕ್ಕೆ ಮಾತಿನ ನಾಚಿಕೆಯಿಲ್ಲ, ಮಾತಿಗೆ ಮನದ ನಾಚಿಕೆಯಿಲ್ಲ. ಕಂಬಳಿಯಲ್ಲಿ ಕಣಕವ ನಾದವ ಕೆಲಸ ನಡೆದೇ ಇದೆ.

ಲೋಕೋಪಚಾರಕ್ಕೆ ಮಜ್ಜನಕ್ಕೆರೆಯುವ ಲಾಂಛನ ನಮ್ಮದು. ಮನದ ಕಸ ತೊಳೆದಿಲ್ಲ, ಒಳಗೆ ಕುಟಿಲ, ಹೊರಗೆ ವಿನಯ. ವ್ಯಕ್ತಿ ಪ್ರತಿಷ್ಠೆ ಸಮಾಜ ದೇಗುಲಕ್ಕೆ ಹೊನ್ನ ಕಳಸವಾಗಿದೆ.

ಇವೆಲ್ಲ ಅಣ್ಣ ಬಸವಣ್ಣ ತನ್ನ ಕಾಲದ ವ್ಯವಸ್ಥೆಯನ್ನು ಕಂಡು ಆಡಿದ ಮಾತುಗಳು. ಈ ವ್ಯವಸ್ಥೆ ಅಥವಾ ಪರಿಸ್ಥಿತಿ ಅಣ್ಣನ ಕಾಲಕ್ಕಿಂತ ಇಂದು ಭಿನ್ನವಾಗಿದೆ ಎಂದೇನೂ ಇಲ್ಲ. ಅವನ ಕಾಲದಲ್ಲಿ ಅನಕ್ಷರತೆಯಿತ್ತು; ಅಂಧಶ್ರದ್ಧೆ ಇತ್ತು; ರಾಜಶಾಹಿಯಿತ್ತು; ಪುರೋಹಿತಶಾಹಿಯಿತ್ತು. ಇಂದು ಆ ಸ್ಥಾನಗಳಲ್ಲಿ ಸಾಕ್ಷರತೆ ಬಂದಿದೆ; ವಿಚಾರವಾದ ಬಂದಿದೆ; ಪ್ರಜಾಸತ್ತೆ ಬಂದಿದೆ, ಪ್ರಭಾವಶಾಹಿ ಬಂದಿದೆ; ಹಬ್ಬಿದೆ. ಆದರೆ ಸಾಕ್ಷರತೆ ಸಂಕೋಚದ ಸಂಕೋಲೆಯಲ್ಲಿ ಸಿಕ್ಕಿದೆ; ವಿಚಾರವಾದ ವಿವಂಚನೆಗೆ ಒಳಗಾಗಿದೆ; ಪ್ರಜಾಸತ್ತೆ ಪರಿತಪಿಸುತ್ತದೆ. ಪ್ರಭಾವಶಾಹಿ ಸರ್ವವ್ಯಾಪಿಯಾಗಿದೆ.

ಇದನ್ನೆಲ್ಲ ಗಂಭೀರವಾಗಿ ಚಿಂತಿಸುತ್ತಿರುವಂತೆ ಕಾಣುವುದಿಲ್ಲ. ನಾವು ಆಚರಿಸುವ ಜಯಂತಿಗಳು ಅಂತಹ ಚಿಂತನೆಗೆ ನಮ್ಮ ಹಚ್ಚಬೇಕಾಗಿದೆ. ನಮ್ಮ ಬದುಕಿಗೆ ಶರಣ ಸಂಸ್ಕೃತಿಯ ಸಂಸ್ಕಾರ ನೀಡಬೇಕಾಗಿದೆ.

ನಾವು ಹುಟ್ಟುತ್ತಲೇ ಸಾವನ್ನು ಕಟ್ಟಿಕೊಂಡೇ ಬಂದಿದ್ದೇವೆ. ಹುಟ್ಟು ಆಕಸ್ಮಿಕ, ಸಾವು ನಿಶ್ಚಿತ ಎಂಬ ಮಾತು ಹೊಸದೇನಲ್ಲ. ಈ ಹುಟ್ಟು ಸಾವುಗಳ ಮಧ್ಯೆ ಇರುವುದೇ ಬದುಕು. ಈ ಬದುಕು ನಮಗಷ್ಟೇ ಅಲ್ಲ. ನಮ್ಮ ಸುತ್ತ ಮುತ್ತಣ ಪರಿಸರಕ್ಕೂ ಸಹ್ಯವಾಗಬೇಕು. ಸಹಾಯವಾಗಬೇಕು. ನೆಮ್ಮದಿ ನೀಡಬೇಕು. ಇಂತಹ ಬದುಕಿಗೆ ಶರಣ ಸಂಸ್ಕೃತಿ ಎಂದೆಂದಿಗೂ ಬತ್ತದ ಜಲಮೂಲ, ಸವೆಯದ ಸಾಮಗ್ರಿ, ಆರದ ಬೆಳಕು. ವಾಸ್ತವವಾಗಿ ಬಸವಣ್ಣ ಮತ್ತು ಅವನ ಸಮಕಾಲೀನ ಶರಣರು ಸಾರಿದ ಸಂಸ್ಕೃತಿ ಒಂದು ಜೀವನ ಶಿಸ್ತು.

ಅಣ್ಣನ ಕಣ್ಣು ಸೂಚಿಸುತ್ತದೆ– ಅರಿದಡೆ ಶರಣ, ಮರೆದಡೆ ಮಾನವ. ಆದಕಾರಣ ನಮ್ಮ ಮದವಳಿದು ನಿಜವುಳಿಯಬೇಕು. ನಾವು ಕಾಯವಂಚಕರಾಗಬಾರದು, ಜೀವವಂಚಕರಾಗಬಾರದು. ಸುಖಕ್ಕೆಂದು ಹಚ್ಚಿದ ದೀಪ ಮನೆಯನ್ನೇ ಸುಡುವಂತಾಗಬಾರದು. ನಮ್ಮಲ್ಲಿ ಸತ್ಯವಿದೆ, ಸಮಾಧಾನವಿದೆ. ಅದು ಮನಕ್ಕೆ ಬಾರದಿದ್ದರೆ ಹೇಗೆ?

❋

# ವಚನಗಳ ವಿಶ್ಲೇಷಣೆ

*ಎತ್ತೆತ್ತ ನೋಡಿದಡದರತ್ತತ್ತ ನೀನೇ ದೇವ!*
*ಸಕಲವಿಸ್ತಾರದ ರೂಹು ನೀನೇ ದೇವ!*
*ವಿಶ್ವತೋಚಕ್ಷು ನೀನೇ ದೇವ!*
*ವಿಶ್ವತೋಮುಖ ನೀನೇ ದೇವ!*
*ವಿಶ್ವತೋಬಾಹು ನೀನೇ ದೇವ!*
*ವಿಶ್ವತೋಪಾದ ನೀನೇ ದೇವ ಕೂಡಲಸಂಗಮದೇವ!*

ಬಸವಣ್ಣನವರಿಗೆ – ಶಿವನು ವಿಶ್ವಮಯವಾದರೆ ವಿಶ್ವವೂ ಶಿವಮಯ ! ಎಲ್ಲೆಡೆ ಅರಳಿ ಆವರಿಸಿರುವ ಶಿವದ ಕಣ್ಣಿನ ಕಾಂತಿಯಲ್ಲಿ ನಡೆದಾಡುವ ಅವರಿಗೆ, ಎಲ್ಲರ ಕಣ್ಣಿನಲ್ಲಿ ಶಿವಕಾಂತಿ ಕಾಣುವುದು. ಎಲ್ಲೆಡೆ ಅಭಿಮುಖವಾಗಿರುವುದು ಶಿವಮುಖದಲ್ಲಿ ಮಾತಾಡುವ ಅವರಿಗೆ, ಎಲ್ಲರ ಮುಖದಲ್ಲಿಯೂ ಶಿವಬಿಂಬ ಕಾಣುವುದು. ಎಲ್ಲೆಡೆ ತಮ್ಮನ್ನು ತಬ್ಬಿ ಹಬ್ಬಿರುವ ಶಿವಬಾಹುಗಳಲ್ಲಿ ತನ್ಮಯರಾಗಿರುವ ಅವರಿಗೆ, ಎಲ್ಲರ ಬಾಹುಲತೆಗಳಲ್ಲೂ ಶಿವಾಲಿಂಗನವೇ ಅನುಭವಕ್ಕೆ ಬರುವುದು. ಎಲ್ಲೆಡೆ ಅಂಕಿತವಾಗಿರುವ ಶಿವದ ಹೆಜ್ಜೆಯ ಗುರುತನ್ನೇ ಅನುಸರಿಸಿ ಗಮಿಸುವ ಬಸವಣ್ಣನವರಿಗೆ ಜಂಗಮಲೋಕದ ಪಾದಪರಿಚರ್ಯೆಯೇ ತಮ್ಮ ಪವಿತ್ರ ಚರ್ಯೆಯೆನಿಸುವುದು. ಎಲ್ಲವೂ ಶಿವನಲ್ಲಿರುವುದೆಂದು ಎಲ್ಲವನ್ನೂ ತಿರಸ್ಕರಿಸುವುದಿಲ್ಲ, ಎಲ್ಲದರಲ್ಲೂ ಶಿವನಿರುವನೆಂದು, ಎಲ್ಲವನ್ನೂ ಪುರಸ್ಕರಿಸುವುದೇ ನಿಜವಾದ ವಿಶ್ವರೂಪದರ್ಶನ. ಆದುದರಿಂದಲೇ ಬಸವಣ್ಣನವರು ಹೇಳಿರುವುದು : ''ಎತ್ತೆತ್ತ ನೋಡಿದರತ್ತತ್ತ ನೀನೇ ದೇವ, ಸಕಲ ವಿಸ್ತಾರದ ರೂಹು ನೀನೇ ದೇವ'' ಎಂದು.

*ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲ!*
*ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ!*
*ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮಕುಟ!*
*ಸಾಕ್ಷಿ :*
*ಪಾದಾಭಿನ್ನಾಹಿಲೋಕಾಯ ಮೌಳಿಬ್ರಹ್ಮಾಂಡ ಭಿತ್ತಯೇ*
*ಭುಜಪ್ರಾಂತದಿಗಂತಾಯ ಭೂತಾನಾಂ ಪತಯೇ ನಮಃ ॥*
*ಅಗಮ್ಯ-ಅಗೋಚರ-ಅಪ್ರತಿಮ ಲಿಂಗವೇ*
*ಕೂಡಲಸಂಗಮದೇವಯ್ಯ,*
*ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ!*

ಹರನ ವಿರಾಡ್ರೂಪದ ಅದ್ಭುತ ಚಿತ್ರವನ್ನು ಬಸವಣ್ಣನವರು ತಮ್ಮ ಭಕ್ತಿಯ ಬಣ್ಣದಿಂದ ಇಲ್ಲಿ ಬಿಡಿಸಿರುವರು. ಹರನ ಹರಹು ಜಗದಗಲವೇ? ಅಲ್ಲ! ಅದು ಆ ಜಗತ್ತನ್ನು ಅನಾದಿ-ಅನಂತವಾಗಿ ಆವರಿಸಿರುವ ಮುಗಿಲಗಲವೇ? ಅಲ್ಲ! ಅದಕ್ಕೂ ಮಿಗಿಲಾದುದು ಎಂದು ಉಲ್ಲೇಖಿಸಿರುವರು. ಆ ಹರನ ಶ್ರೀ ಮುಕುಟ ಅನಂತಬ್ರಹ್ಮಾಂಡದ ತುತ್ತತುದಿಯಿಂದತ್ತ ಹತ್ತು ಅಂಗುಲ ಆಚೆಗಿದೆ, ಅಲ್ಲಿಗೇರಲಾಗದು ನಮ್ಮಿಂದ. ಅವನ ಶ್ರೀ ಚರಣತಲವಾದರೋ ಅತಳ-ಪಾತಾಳದಿಂದತ್ತತ್ತ ನೆಲೆಸಿರುವುದು. ಅಲ್ಲಿಗಿಳಿಯಲಾಗದು ನಮ್ಮಿಂದ. ಅವನ ಅಭಯವರದಭುಜ ಪ್ರಾಂತವೋ ದಿಗ್ದಂತ ವಿಶ್ರಾಂತ ! ಇಲ್ಲಿಂದಲ್ಲಿಗೆ ಹರಿದಾಡಲಾಗದು ನಮ್ಮಿಂದ. ಹೀಗಿರುವ ಅಗಮ್ಯ ಅಗೋಚರ ಅಪ್ರತಿಮ ಶಿವನನ್ನು ಭಜಿಸುವ ಬಗೆಯೆಂದರೆ– ತನ್ನ ವಿರಾಡ್ರೂಪವನ್ನು ಅಡಕವಾಗಿಸಿಕೊಂಡು ಕರತಲಾಮಲಕದಂತಿರುವ ಇಷ್ಟಲಿಂಗವನ್ನು ವಿರಾಡ್ರೂಪನ ಕೃಪಾರೂಪವೆಂದು ಉಪಾಸಿಸುವುದೊಂದೇ ! ಹೀಗೆ ಎಲ್ಲವನ್ನೂ ತನ್ನ ಮೈಯಲ್ಲಿ ಅಡಗಿಸಿಕೊಂಡಿರುವ ಮಹಾದೇವನನ್ನು ನನ್ನ ಕೈಯಲ್ಲಿ ಅಡಗಿಸಿಕೊಂಡಿರುವೆನೆಂಬುದೇ ವೀರಶೈವದ ವಿಶಿಷ್ಟ ಶಕ್ತಿ !!

*ದೇವನೊಬ್ಬ ನಾಮ ಹಲವು!*
*ಪರಮ ಪತಿವ್ರತೆಗೆ ಗಂಡನೊಬ್ಬ*
*ಹಲವು ದೈವದೆಂಜಲ ತಿಂಬವರನೇನೆಂಬೆ*
*ಕೂಡಲಸಂಗಮದೇವ.*

ಶಿವ ವಿಷ್ಣು ಮುಂತಾದ ಹೆಸರುಗಳು ಹಲವಾದರೂ, ಆ ಹಲವಾರು ಹೆಸರುಗಳು ಅನ್ವಯಿಸುವ ದೇವನೊಬ್ಬನೇ– ಎನ್ನುವರು ಬಸವಣ್ಣನವರು. ಅನ್ಯದೇವತಾದೂಷಣೆಯಲ್ಲಿ ತೊಡಗದೆ, ತಮ್ಮ ತಮ್ಮ ಆತ್ಮೋನ್ನತಿಗೆ ಒಗ್ಗುವ ಒಂದು ದೇವರಲ್ಲಿ ನಿಶ್ಚಲವಾದ ನಿಷ್ಠೆಯಿರಬೇಕೆಂಬುದೇ ಅವರ ಆಗ್ರಹ. ದೇವರುಗಳೆಲ್ಲ ಒಂದೇ ಆದ ಮೇಲೆ, ಎಲ್ಲ ದೇವರನ್ನೂ ಉಪಾಸಿಸುವೆನೆಂಬುದರಿಂದ ಬದುಕು ಬರಿಯ ಬವಣೆಯಾಗುವುದು.

ಹಲವು ದೇವರುಗಳೆಂಬ ಬೆರಣಿಯನ್ನು ಆಯ್ದು ಒಟ್ಟುವುದರಲ್ಲೇ ಕಾಲವನ್ನೆಲ್ಲ ಕಳೆದು, ಅನುಭವದಡಿಗೆಯನ್ನು ಅಟ್ಟುಣ್ಣಲು ಬಿಡುವಿಲ್ಲವೆನ್ನುವಂತಾಗುವುದು ಎಷ್ಟು ಶೋಚನೀಯ ! ಆ ದೇವರು ಈ ದೇವರೆಂದು ಸುತ್ತೆಲ ಅಲೆಯುತ್ತ ಏಕದೇವತೋಪಾಸನೆಯ ಸೂತ್ರವಿಡಿಯದೆ, ಹೃದಯದಾಳಕ್ಕಿಳಿಯದೆ, ಸ್ವಸ್ಥವಾಗಿದ್ದು ಸಚ್ಚಿದಾನಂದಚಿಂತನ ರತ್ನಗಳನ್ನು ಎತ್ತದೆ ನಿರರ್ಥವಾಗುವ ಇಂತಹ ಜೀವರುಗಳನ್ನು ಕಂಡು ಬಸವಣ್ಣನವರು ವ್ಯಗ್ರಗೊಂಡಿರುವರು. ಪ್ರೇಮಜಗತ್ತಿನ ನಾನಾ ಭಾವನೆಗಳ ಸಾರಸರ್ವಸ್ವನ್ನೂ ಸೂರೆಗೊಳ್ಳಲು ಸಾಧ್ವೀಶಿರೋಮಣಿಯು ಅವಲಂಬಿಸುವುದು ಒಬ್ಬನೇ ಒಬ್ಬ ಗಂಡನನ್ನಲ್ಲವೇ? ಹಲವರೆಡೆ ಹರಿದಾಡಿದ ಕುಲಟೆ ಇಹಜೀವನದ ತನಿಸುಖದಿಂದ ವಂಚಿತಳಾಗುವಳೆಂಬುದು ಎಲ್ಲರೂ ಕಂಡ ವಿಷಯವೇ ಆಗಿದೆ.

*(ಕೃಪೆ : ಬಸವ ವಚನಾಮೃತ)*





# ಶರಣ ಸಾಹಿತ್ಯದ ಪ್ರಸ್ತುತತೆ



– ಡಾ ॥ ಜಿ.ಎಸ್. ಶಿವರುದ್ರಪ್ಪ
ನಂ. ೮೬೭, 'ಚೈತ್ರ' ೧೮ನೆಯ ಮುಖ್ಯರಸ್ತೆ
ಬನಶಂಕರಿ ೨ನೇ ಹಂತ
ಬೆಂಗಳೂರು – ೫೬೦ ೦೭೦.

ಹನ್ನೆರಡನೆಯ ಶತಮಾನದಂದು ಕರ್ನಾಟಕದ ಕಲ್ಯಾಣ ಕೇಂದ್ರದಲ್ಲಿ ಸಂಭವಿಸಿದ ಸಾಮಾಜಿಕ ಧಾರ್ಮಿಕ ಸ್ವರೂಪದ ಶರಣ ಧರ್ಮ ಎನ್ನುವುದು ಅಂದಿನ ಸಮಾಜದ ವಿವಿಧ ಸ್ತರಗಳ ಜನಶಕ್ತಿಯನ್ನು ಮೊಟ್ಟ ಮೊದಲ ಬಾರಿಗೆ ಸಂಘಟಿಸಿ ಒಂದು ವೈಚಾರಿಕ ಸ್ಫೋಟವನ್ನು ತಂದ ಅಪೂರ್ವವಾದ ಐತಿಹಾಸಿಕ ಘಟನೆಯಾಗಿದೆ. ಅಂದು ಬಸವಾದಿ ಶರಣರು ಯಾವ ಒಂದು ಕ್ರಾಂತಿಯನ್ನು ಕರ್ನಾಟಕದ ಚೌಕಟ್ಟಿನಲ್ಲಿ ಮಾಡಿದರೋ ಅದು ಇಂದಿಗೂ ಅನೇಕಾಂಶಗಳಲ್ಲಿ ನಮಗೆ ಪ್ರಸ್ತುತವಾಗಿದೆ ಅನ್ನುವುದೇ ಆ ಮಹಾಪ್ರಯೋಗದ ಮೌಲಿಕತೆಗೆ ಸಾಕ್ಷಿಯಾಗಿದೆ. ಅದನ್ನು ಮಾಡಿದವರು ನಮ್ಮ ನಿಮ್ಮಂತಹ ಬಾಳಿಬದುಕಿದ ಮನುಷ್ಯರೇ ಹೊರತು ಕೈಲಾಸದಿಂದ ಇಳಿದು ಬಂದ ದೇವಾನುದೇವತೆಗಳಲ್ಲ. ಅಂದಿನ ಈ ಮನುಷ್ಯರು ತಮ್ಮ ಸಮಕಾಲೀನರಾದ ಮನುಷ್ಯರಿಗಾಗಿ ಮನುಷ್ಯರ ಜತೆಗೆ ತಮ್ಮನ್ನು ಸಂಗಡಿಸಿಕೊಂಡು ತೀವ್ರವಾಗಿ ಅಂದಿನ ವ್ಯವಸ್ಥೆಗೆ ಸ್ಪಂದಿಸಿದ್ದರಿಂದ ಸಂಭವಿಸಿದ್ದ ಈ ಕ್ರಾಂತಿ ಇರುವ ಹಾಗೂ ಸ್ಥಗಿತಗೊಂಡ ವ್ಯವಸ್ಥೆಯನ್ನು ಬದಲಾಯಿಸಿ ಎಲ್ಲರೂ ಸಮಾನವಾಗಿ ವೈಚಾರಿಕನಾಗಿ ಬದುಕುವುದು ಹೇಗೆ, ಮನುಷ್ಯನನ್ನು ಅವನಿರುವ ಯಥಾಸ್ಥಿತಿಯಿಂದ ಪಾರುಮಾಡಿ ಅವನನ್ನು ನಿಜವಾದ ಹಾಗೂ ಸ್ವತಂತ್ರವಾದ ಮನುಷ್ಯನನ್ನಾಗಿ ಮಾಡುವುದು ಹೇಗೆ - ಎಂಬ ಕಾಳಜಿಗಳಿಂದ ರೂಪುಗೊಂಡದ್ದು ಶರಣಧರ್ಮ.

ಹನ್ನೆರಡನೆಯ ಶತಮಾನದ ಆ ಕಾಲದಿಂದ ನಾವು ಈಗ ಬಹುದೂರ ಬಂದಿದ್ದೇವೆ ಅಥವಾ 'ಮುಂದುವರಿದಿದ್ದೇವೆ'. ಹೀಗೆ 'ಮುಂದುವರಿದು' ಈ ಕಾಲದವರಾದ ನಮಗೆ ಎಂಟುನೂರು ವರ್ಷಗಳ ಕಾಲದ ಹಿಂದಿನ ಶರಣರ ವಿಚಾರಗಳು ಎಷ್ಟು ಪ್ರಸ್ತುತ ಎಂದು ಕೇಳಿಕೊಳ್ಳುವುದು ಸಹಜವಾದರೂ, ಸರಿಯಾಗಿ ವಿಚಾರ ಮಾಡಿದಲ್ಲಿ, ನಾವು ನಿಜವಾಗಿಯೂ ಆ ಕಾಲಕ್ಕಿಂತ 'ಅಂತರಂಗಿಕವಾಗಿ' ಅಷ್ಟೇನೂ ಮುಂದುವರಿದಿದ್ದೇವೆ ಎಂದು ಹೇಳಿಕೊಳ್ಳುವ ಧೈರ್ಯ ನಮಗಿಲ್ಲ. ಮೇಲೆ ನಾಗರಿಕನಾಗೇನೋ ಮುಂದುವರಿದಂತೆ ತೋರಿದರೂ, ಒಳಗಿನ ಮನುಷ್ಯ ಅಷ್ಟೇನೂ ಬದಲಾಗಿದ್ದಾನೆ ಎಂದು ಹೇಳಲು ಬಾರದು.

ನಿಜ, ನಾವೀಗ ಇಪ್ಪತ್ತನೆಯ ಶತಮಾನದ ವಿಜ್ಞಾನಯುಗದಿಂದ ಇಪ್ಪತ್ತೊಂದನೆ ಶತಮಾನದೊಳಕ್ಕೆ ಕಾಲಿಡುವ ಮಹತ್ವದ ಕಾಲಘಟ್ಟದಲ್ಲಿ ನಿಂತಿದ್ದೇವೆ. ಇಪ್ಪತ್ತನೆಯ ಶತಮಾನ ಈ ಜಗತ್ತಿನ ಬದುಕಿನಲ್ಲಿ ಮಹತ್ವದ ಪಲ್ಲಟಗಳನ್ನು ತಂದಿದೆ. ಅನೂಹ್ಯವಾದ ವೈಜ್ಞಾನಿಕ ಸಾಹಸಗಳಿಂದಾಗಿ ಮನುಷ್ಯನ **'ನಾಗರಿಕತೆ'**ಯಲ್ಲಿ ವಿಶೇಷವಾದ ಪ್ರಗತಿಯಾಗಿದೆ. ಆದರೆ ವಿಜ್ಞಾನದ ಸವಲತ್ತುಗಳನ್ನು ನಮ್ಮ ಸುಖ- ಸೌಕರ್ಯಗಳಿಗಾಗಿ ಪಡೆದುಕೊಳ್ಳುವುದರಲ್ಲಿ ನಾವು ತಾಳಿದ ಆಸಕ್ತಿಯನ್ನು ವೈಜ್ಞಾನಿಕ ಮನೋಧರ್ಮವನ್ನು ಬೆಳೆಯಿಸಿಕೊಳ್ಳುವ ವಿಚಾರದಲ್ಲಿ ನಾವು ತೋರಲಿಲ್ಲ. ಹೀಗಾಗಿ ಸಾಂಪ್ರದಾಯಿಕವಾದ ಅನೇಕ ಅವೈಚಾರಿಕ ಸಂಗತಿಗಳು ಇಂದಿಗೂ ನಮ್ಮ ಬದುಕನ್ನು ಗುತ್ತಿಗೆ ಹಿಡಿದುಕೊಂಡಿವೆ. ಮತ್ತೊಂದೆಡೆ ಈ ಶತಮಾನದಲ್ಲಿ ಭಾರತದ ಜನಶಕ್ತಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ಸಂಘಟಿತಗೊಂಡು ತನ್ನ ಸಂವಿಧಾನದಲ್ಲಿ ಸಮಾನತೆ, ಸಹೋದರತೆ, ಸಾಮಾಜಿಕ ನ್ಯಾಯ, ಜಾತ್ಯಾತೀತತೆ ಇತ್ಯಾದಿಗಳನ್ನು ಬದುಕಿನ ಮೌಲ್ಯಗಳೆಂದು ಘೋಷಿಸಿಕೊಂಡರೂ ಸಮಕಾಲೀನ 'ರಾಜಕಾರಣ' ಈ ಎಲ್ಲವನ್ನೂ ಹೇಗೆ ಅಪಮೌಲ್ಯೀಕರಣಗೊಳಿಸುತ್ತ ವಿಜೃಂಭಿಸುತ್ತಿದೆ ಅನ್ನುವುದನ್ನು ನೋಡಿದರೆ ಗಾಬರಿಯಾಗುತ್ತದೆ. ದೇಶದ

ಅಭಿವೃದ್ಧಿಯ ಹೆಸರಿನಲ್ಲಿ ನಡೆಯುತ್ತಿರುವ ಪರಿಸರನಾಶದ ತಲ್ಲಣಗಳು, ಧಾರ್ಮಿಕ ಮೂಲಭೂತವಾದಿಗಳ ಅಬ್ಬರಗಳು ಭಿನ್ನಾಭಿಪ್ರಾಯಗಳನ್ನು ಗೌರವಿಸದೆ ತನ್ನದೇ ಸರಿ ಎಂದು ವಾದಿಸುವ ಅಸಹನೆ, ಕೆಳವರ್ಗದವರ ಮೇಲೆ ಮೇಲ್ ವರ್ಗದವರಿಂದ ನಿರಂತರವೂ ನಡೆಯುತ್ತಿರುವ ಹಲ್ಲೆ ಹಾಗೂ ಶೋಷಣೆಗಳು - ಇತ್ಯಾದಿಗಳನ್ನು ನೋಡಿದರೆ ಸಮಾನತೆ, ಸಹೋದರತೆ, ಸಹಿಷ್ಣುತೆ, ಸಾಮಾಜಿಕ ನ್ಯಾಯ ಇಂಥ ಮಾತುಗಳಿಗೆ ಏನಾದರೂ ಅರ್ಥ ಉಂಟೆ ಎಂದು ಅನ್ನಿಸುತ್ತದೆ. ಇಂಥ ಪರಿಸ್ಥಿತಿಯಲ್ಲಿ ನಾವು ಹೊರಳಿ ನೋಡಿದರೆ ಎಂಟು ನೂರು ವರ್ಷಗಳ ಹಿಂದೆ ಬಸವಾದಿ ಶರಣರು ಕರ್ನಾಟಕ ಕೇಂದ್ರದಲ್ಲಿ ನಡೆಯಿಂದ ಸಾಧಿಸಿದ ವೈಚಾರಿಕ ಕ್ರಾಂತಿ ಎಷ್ಟು ಮಹತ್ವದ್ದು ಹಾಗೂ ಎಷ್ಟು ಪ್ರಸ್ತುತವಾದದ್ದು ಎಂದು ಅನ್ನಿಸದೆ ಇರದು.

ಆದರೆ ಗಮನಿಸಬೇಕಾದ ಅಂಶವೊಂದಿದೆ: ಯಾವ ಧರ್ಮದ ಎಲ್ಲ ಅಂಶಗಳೂ ಎಲ್ಲ ಕಾಲಕ್ಕೂ ಪ್ರಸ್ತುತವಾಗುತ್ತವೆ ಎಂದು ಹೇಳಲು ಬರುವುದಿಲ್ಲ. ಮತ್ತೆ ಮತ್ತೆ ಸ್ಥಗಿತಗೊಳ್ಳುವುದೇ ಎಲ್ಲ ಧರ್ಮಗಳ ಲಕ್ಷಣವಾಗುವುದರಿಂದ ಮತ್ತೆ ಮತ್ತೆ ಅದನ್ನು 'ಜಂಗಮ' ಅಥವಾ ಚಲನಶೀಲಗೊಳಿಸುವ ಪ್ರಯತ್ನಗಳು ನಡೆಯಬೇಕು. ಶರಣಧರ್ಮದ ಎಷ್ಟೋ ಅಂಶಗಳು ಇಂದಿನ ಬದುಕಿಗೆ ಅಪ್ರಸ್ತುತವಾಗಿವೆ; ಎಷ್ಟೋ ಸಂಗತಿಗಳು ಅಪವ್ಯಾಖ್ಯಾನಗೊಂಡಿವೆ. ಆದರೂ ಶರಣ ಧರ್ಮದ ಎಷ್ಟೋ ಮಹತ್ವದ ವಿಚಾರಗಳು ಈ ಹೊತ್ತಿಗೆ ಮಾತ್ರವಲ್ಲ, ಎಲ್ಲ ಕಾಲಕ್ಕೂ ಪ್ರಸ್ತುತವಾಗಬಲ್ಲ ಮಹತ್ವವನ್ನು ಪಡೆದುಕೊಂಡಿವೆ ಅನ್ನುವುದು ಹರ್ಷದಾಯಕವಾದ ವಿಚಾರವಾಗಿದೆ.

ಧರ್ಮ ಹಾಗೂ ದೇವರ ಕಲ್ಪನೆಗಳು ಮುಖ್ಯವಾಗಿ ಮನುಷ್ಯನ ಸಾಮಾಜಿಕ ಮತ್ತು ಆಧ್ಯಾತ್ಮಿಕ ಅಗತ್ಯಗಳು. ಅದ ಕಾರಣ ಮನುಷ್ಯ ಒಬ್ಬ ವ್ಯಕ್ತಿಯಾಗಿ, ಕುಟುಂಬ ಜೀವಿಯಾಗಿ ಸಮಾಜವೊಂದರ ಸದಸ್ಯನಾಗಿ ಬದುಕಬೇಕಾದರೆ ಯಾವ ಯಾವ ಲೌಕಿಕ, ನೈತಿಕ ಮತ್ತು ಆಧ್ಯಾತ್ಮಿಕ ವಿಚಾರಗಳೂ ನಂಬಿಕೆಗಳೂ ನಿಲುವುಗಳೂ ಅವಕಾಶಗಳೂ ಅಗತ್ಯವೋ ಅವನ್ನೆಲ್ಲ ರೂಪಿಸುವ ಒಂದು ಶಕ್ತಿಯೇ ಧರ್ಮ. ಅಂದರೆ ಮೊದಲು ಅದು ಒಳ್ಳೆಯ ಸಾಮಾಜಿಕ ಮನುಷ್ಯನನ್ನು ನಿರ್ಮಾಣ ಮಾಡಬೇಕು. ಯಾಕೆಂದರೆ 'Religion is man making'. ಹಾಗಾದಾಗ ಅದು ಎಲ್ಲ ವರ್ಗಗಳ ಶ್ರೇಯಸ್ಸನ್ನು ಸಾಧಿಸುವಂತಾಗುತ್ತದೆ. ಇದು ಒಂದು ಧರ್ಮಕ್ಕೆ ಇರುವ ಸಾಮಾಜಿಕ ಜವಾಬ್ದಾರಿ. ಎಲ್ಲರ ಶ್ರೇಯಸ್ಸನ್ನೂ ಸಾಧಿಸಬೇಕಾದರೆ ಒಂದು ಸಮಾಜದ ಎಲ್ಲರನ್ನೂ ತನ್ನವರೆಂದೂ ಸಮಾನರೆಂದೂ ಪರಿಗಣಿಸುವ ಉದಾರತೆ ಬೇಕು ಮತ್ತು ಸಾಮಾಜಿಕ ತರ-ತಮಗಳ ಹಿಂದಿರುವ ಕಾರಣಗಳನ್ನು ಪ್ರಶ್ನಿಸುವ ಪ್ರತಿಭಟಿಸುವ ವೈಚಾರಿಕತೆ ಬೇಕು. ಈ ಮೂರು ಏಕಕಾಲಕ್ಕೆ ಕಾಣಿಸಿಕೊಂಡದ್ದು ಕರ್ನಾಟಕದ ಪ್ರಮುಖ ಧರ್ಮವಾದ, ಭಾರತದ ವಿಶಿಷ್ಟ ಧರ್ಮವಾದ ಶರಣ ಧರ್ಮದಲ್ಲಿ. ಅದ್ಭುತವಾಗಿ ಜೀವನವನ್ನು ಪ್ರೀತಿಸುವ ವರ್ಣಭೇದ, ವರ್ಗಭೇದ, ಲಿಂಗಭೇದಗಳನ್ನು ನಿರಾಕರಿಸುವ ವೈಚಾರಿಕ ಎಚ್ಚರದಲ್ಲಿ ತನ್ನ ಅಂತರಂಗ-ಬಹಿರಂಗಗಳನ್ನು ಒರೆಗಲ್ಲಿಗೆ ಹಚ್ಚಿ ನೋಡುವ ಮತ್ತು ಆ ಪರಾತ್ಪರದ ಶರಣನಾಗುವುದರಲ್ಲಿಯೇ ಬದುಕಿನ ಸಾರ್ಥಕತೆಯಿದೆ ಎಂದು ನಂಬುವ ನವಮಾನವ ನಿರ್ಮಿತಿಯ ಪರಿಣಾಮವೇ ಶರಣಧರ್ಮ.

ಈ ದಿನ ಅನೇಕ ಮಹತ್ವದ ಚಳುವಳಿಗಳಲ್ಲಿ 'ಜಾತಿವಿನಾಶ ಚಳುವಳಿ'ಯೂ ಒಂದು. ಗಾಂಧಿ, ಅಂಬೇಡ್ಕರ್, ಲೋಹಿಯಾ ಇತ್ಯಾದಿ ಮಹಾನ್ ವ್ಯಕ್ತಿಗಳ ವಿಚಾರಧಾರೆಯಿಂದ ಸ್ಫೂರ್ತಿಗೊಂಡ ಅನೇಕ ಸಂಘ-ಸಂಘಟನೆಗಳೂ ಹಾಗೂ ಬುದ್ಧಿಜೀವಿ ತಂಡಗಳೂ ಜಾತಿ-ವಿನಾಶ ಆಂದೋಲನವನ್ನು ಹಮ್ಮಿಕೊಂಡಿವೆ. ಹಾಗೂ ಈ ಜಾತಿ ವಿನಾಶಕ್ಕೆ ಅಂತರಜಾತಿಯ ವಿವಾಹಗಳೂ ಬಹು ಮುಖ್ಯವಾದ ಸಾಧನೆಗಳೆಂದು ಅವುಗಳನ್ನು ಪ್ರೋತ್ಸಾಹಿಸುತ್ತಿವೆ. ಆದರೆ ಹನ್ನೆರಡನೆಯ ಶತಮಾನದಷ್ಟು ಹಿಂದೆ ಬಸವಾದಿ ಶರಣರು ಈ ದಿಕ್ಕಿನಲ್ಲಿ ನಡೆಯಿಸಿದ ಪ್ರಯತ್ನಗಳೂ, ಅವರ ವಿಚಾರಗಳೂ ಹಾಗೂ ಪ್ರಯೋಗಗಳೂ ಎಷ್ಟು ಮಹತ್ವದವುಗಳೆಂಬುದನ್ನು ನಮ್ಮ ಇಂದಿನ ಸುಧಾರಕರೂ ಚಳುವಳಿಗಾರರೂ ಗಮನಿಸುವುದು ಅಗತ್ಯವಾಗಿದೆ.

ಶರಣ ಧರ್ಮ ಮುಖ್ಯವಾಗಿ ವಿರೋಧಿಸಿದ್ದು ಹಿಂದೂ ಧರ್ಮದ ಶ್ರೇಣೀಕರಣ ಸಾಮಾಜಿಕ ವ್ಯವಸ್ಥೆಯನ್ನು. ಮೇಲೆ ಮಾತ್ರ **'ಸರ್ವೇಜನಾ ಸುಖಿನೋಭವಂತು'**, **'ಸರ್ವಂ ಖಲ್ವಿದಂ ಬ್ರಹ್ಮಂ'** ಎಂಬ ಹುಸಿ ಘೋಷಣೆಗಳಿಂದ ಜಗತ್ತನ್ನು ಮೋಸಗೊಳಿಸುತ್ತ ಒಳಗೆ ಮಾತ್ರ ಚಾತುರ್ವರ್ಣ ಪದ್ಧತಿಯನ್ನು ಬಲವಾಗಿ ಸಮರ್ಥಿಸುತ್ತಾ ಹಾಗೂ ಉಳಿಸಿಕೊಳ್ಳುತ್ತಾ ಬಂದ ಹಿಂದೂ ಧರ್ಮದ ತಂತ್ರವನ್ನು ವಚನಕಾರರು ಅತ್ಯಂತ ತೀವ್ರವಾಗಿ ಪ್ರತಿಭಟಿಸಿದರು. ಹಿಂದೂ ಧರ್ಮಕ್ಕೆ ಕಾಲದಿಂದ ಕಾಲಕ್ಕೆ ಭಾಷ್ಯಗಳ ಮೇಲೆ ಭಾಷ್ಯವನ್ನು ಬರೆದ ಆಚಾರ್ಯರಾರೂ ಈ ಶ್ರೇಣೀಕರಣ ವ್ಯವಸ್ಥೆಯನ್ನು, ಬುದ್ಧನ





ಹೊರತು, ಪ್ರಶ್ನಿಸಲೇ ಇಲ್ಲ, ಯಾರ್ಯಾರು ಯಾವ್ಯಾವುದು ಎಲ್ಲೆಲ್ಲಿ ಇರಬೇಕೋ ಅದು ಅಲ್ಲಲ್ಲೇ ಇರುವುದೇ ಧರ್ಮ ಎಂದು ವ್ಯಾಖ್ಯಾನ ಬರೆಯುವುದರಲ್ಲಿಯೆ ಈ ಮಹಾಆಚಾರ್ಯರುಗಳ 'ವೈಚಾರಿಕತೆ'ಯು ಪರ್ಯವಸಾನಗೊಂಡಿತು. ಯಾಕೆಂದರೆ ಮನುಷ್ಯರೆಲ್ಲ ಮೂಲತಃ ಸಮಾನರು ಅನ್ನುವುದನ್ನು ಒಪ್ಪುವ ಒಂದು ಉದಾರತೆಯ ಅವರಲ್ಲಿರಲಿಲ್ಲ. ಹೀಗೆ ಯಾವ ಧಾರ್ಮಿಕ ನಿಲುವು ಕೆಲವರ ಹಿತಾಸಕ್ತಿಗಳನ್ನು ಮಾತ್ರ ಕಾಯುತ್ತ ಇನ್ನುಳಿದ ಸ್ತರಗಳವರನ್ನು ಶೋಷಣೆಗೆ ಗುರುಪಡಿಸುತ್ತ ಅಮಾನವೀಯವಾಗಿದೆಯೋ ಅದನ್ನು ಸ್ಫೋಟಿಸಿ **'ವರ್ಣಸಂಕರ'**ದ ಮೂಲಕ ಈ ಶ್ರೇಣೀಕರಣ ವ್ಯವಸ್ಥೆಯನ್ನು ಮುರಿಯುವ ಮೊದಲ ಕಾರ್ಯ ನಡೆದದ್ದು ಶರಣಧರ್ಮದಿಂದ. ಈ ಬಗೆಯ ಸ್ಫೋಟಕ್ಕೆ ಬಸವಣ್ಣನವರು ಬಳಸಿಕೊಂಡದ್ದು ಅಂದಿನ ವರ್ಣವ್ಯವಸ್ಥೆಯ ನಾಲ್ಕನೆ (ಶೂದ್ರ) ಹಾಗೂ ಐದನೆ (ಅಂತ್ಯಜ) ಜನಶಕ್ತಿಯನ್ನು, ಅಂದರೆ ಅಂದಿನ ಬಹುಸಂಖ್ಯಾತ ಕಸುಬುದಾರರನ್ನು, ಕೃಷಿಕಾರರನ್ನು, ನಿರ್ಲಕ್ಷಿತರನ್ನು, ಶೋಷಿತರನ್ನು ಮತ್ತು ಮಹಿಳೆಯರನ್ನು. ಸಿದ್ಧರಾಮ, ಅಲ್ಲಮಪ್ರಭು, ಚೆನ್ನಬಸವ, ಮಹಾದೇವಿ - ಹೀಗೆ ಇನ್ನೂ ಕೆಲವರನ್ನು ಹೊರತುಪಡಿಸಿದರೆ ಇನ್ನುಳಿದವರೆಲ್ಲ ಕೆಳವರ್ಗದವರೆ, ಅದರಲ್ಲೂ ಬಹುತೇಕ ಅನಕ್ಷರಸ್ಥರೆ. ಇಂಥ ಒಂದು ಸಮುದಾಯವನ್ನು ನವಸಮಾಜ ನಿರ್ಮಾಣದ ವೈಚಾರಿಕ ಕ್ರಾಂತಿಗೆ ಸಜ್ಜುಗೊಳಿಸಿದ ಕ್ರಮವಂತೂ ಚಾರಿತ್ರಿಕವಾಗಿ ಅಪೂರ್ವವಾದ ಸಂಗತಿಯಾಗಿದೆ. ಅದಕ್ಕಾಗಿ ಬಸವಣ್ಣನವರು ಕನ್ನಡವನ್ನು ಅಂದಿನ ಧರ್ಮದ ಭಾಷೆಯನ್ನಾಗಿ, ವಿಚಾರದ ಭಾಷೆಯನ್ನಾಗಿ, ಸಂವಹನದ ಭಾಷೆಯನ್ನಾಗಿ ರೂಢಿಸಿದ್ದರಿಂದ ಕನ್ನಡ ಭಾಷೆಗೆ ದೊರೆತ ಸೃಜನಶೀಲ ಹಾಗೂ ತತ್ಪರಿಣಾಮವಾದ 'ವಚನ' ಎಂಬ ಅಭಿವ್ಯಕ್ತಿ ಪ್ರಕಾರದ ಆವಿಷ್ಕಾರಗಳು ಕನ್ನಡ ಸಾಹಿತ್ಯಕ್ಕೆ ಮಾತ್ರವಲ್ಲ, ಜಾಗತಿಕ ಸಾಹಿತ್ಯಕ್ಕೆ ಅಪೂರ್ವವಾದ ಕೊಡುಗೆಗಳಾಗಿವೆ. ಕನ್ನಡನಾಡಿನಲ್ಲಿ ಕನ್ನಡದ ಸ್ಥಾನಮಾನಗಳಿಗೆ ಹಾಗೂ ಕನ್ನಡ ಮಾಧ್ಯಮಕ್ಕೆ ಹೋರಾಡುವ ದುಃಸ್ಥಿತಿಯಲ್ಲಿರುವ ನಮಗೆ ಕನ್ನಡ ಮಾಧ್ಯಮವು ಪರಿಣಾಮಕಾರಿಯಾಗಿ ಜಾರಿಗೆ ಬಂದಿದ್ದರೆ ಅದು ಹನ್ನೆರಡನೆಯ ಶತಮಾನದಲ್ಲಿಯೆ ಎಂಬ ಸಂಗತಿ ದಂಗುಬಡಿಸುತ್ತದೆ.

ಈ ಒಂದು ಸಂಘಟನೆಯಿಂದ ಶರಣ ಧರ್ಮ ಪರಂಪರಾಗತವಾದ ವರ್ಣವ್ಯವಸ್ಥೆಯನ್ನು ಮುರಿದು 'ವರ್ಣಸಂಕರ'ದ ಮೂಲಕ ಹೊಸ ಧಾರ್ಮಿಕ ನೆಲೆಯೊಂದನ್ನು ನಿರ್ಮಾಣ ಮಾಡಿತು. **'ಕುಲವನರಸುವರೆ ಶರಣರಲ್ಲಿ ವರ್ಣಸಂಕರವಾದ ಬಳಿಕ'** ಎಂದು ಬಸವಣ್ಣನವರು ಕೇಳುವ ಪ್ರಶ್ನೆ ಈ ನೆಲೆಯದೆ. ಹಿಂದೂ ಧರ್ಮದ ಪ್ರಕಾರ 'ವರ್ಣ ಸಂಕರ' ಒಂದು ಮಹಾ ಅನಾಹುತ. ವರ್ಣಸಂಕರದಿಂದ ಧರ್ಮಗ್ಲಾನಿ. ಆದರೆ ಬಸವಣ್ಣನವರಿಗೆ ಅದು ಜಾತಿಯ ಶ್ರೇಣೀಕರಣವನ್ನು ಮುರಿದು ಸಮಾನತೆಯನ್ನು ನೆಲೆಗೊಳಿಸುವ ಸಾಧನ. ಅವರೇ ನಿಂತು ಮಾಡಿಸಿದ 'ಅಂತರ್ಜಾತೀಯ ವಿವಾಹ' ಈ ವರ್ಣಸಂಕರ ಪ್ರಯತ್ನದಲ್ಲಿ ಒಂದು ದಿಟ್ಟ ಹೆಜ್ಜೆ.

ದೇವಸ್ಥಾನಗಳನ್ನು ನಿರಾಕರಿಸಿ, ದೇವರ ಕಲ್ಪನೆಯನ್ನು ಮನುಷ್ಯನ ಶರೀರಕ್ಕೆ ಸ್ಥಳಾಂತರಗೊಳಿಸಿ ದೇಹವನ್ನೆ ದೇವಾಲಯವನ್ನಾಗಿ ಮಾಡಿದ್ದು, ಪುರೋಹಿತಶಾಹಿ ಕಲ್ಪಿಸಿದ ಸ್ವರ್ಗ-ನರಕಾದಿ ಶೋಷಕ ತಂತ್ರಗಳನ್ನು ಖಂಡಿಸಿ ಇಹದ ಬದುಕಿನ ಮೇಲಿನ ಪ್ರೀತಿಯನ್ನು ರೂಢಿಸಿದ್ದು, ಅನೇಕ ಅವೈಚಾರಿಕವಾದ ಆಚರಣೆಗಳನ್ನೂ ಮೂಢನಂಬಿಕೆಗಳನ್ನು ತಿರಸ್ಕರಿಸಿದ್ದು, ವೃತ್ತಿಯ ತರತಮಗಳ ಮೇಲಿನಿಂದ ಮನುಷ್ಯನ ಸಾಮಾಜಿಕ ಅಂತಸ್ತನ್ನು ಪರಿಗಣಿಸದೆ ಕಾಯಕವೆಲ್ಲವೂ ಪೂಜ್ಯವೆಂದು, **'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರೆಲ್ಲರನ್ನೂ ಒಂದೇ ಎಂಬೆ'** ಎಂಬ ನಿಲುವನ್ನು ಪ್ರತಿಪಾದಿಸುತ್ತ ಶ್ರೀಸಾಮಾನ್ಯರಲ್ಲಿ ವೈಚಾರಿಕತೆಯನ್ನೂ ಪ್ರತಿಭಟನೆಯ ಕೆಚ್ಚನ್ನೂ, ಆತ್ಮಗೌರವವನ್ನೂ ಪ್ರಚೋದಿಸಿದ ಶರಣಧರ್ಮದ ವಿಚಾರಗಳಿಗೆ ಸಮಕಾಲೀನರಾದ ನಾವೇ ಅಪ್ರಸ್ತುತರಾಗಿ ಬಿಟ್ಟಿದ್ದೇವೆ ಎನ್ನಿಸುವಂಥ ಸ್ಥಿತಿಯಲ್ಲಿದ್ದೇವೆ.

ಈ ಶರಣಧರ್ಮದ ವಾಙ್ಮಯರೂಪದ ವಿವಿಧ ಅಭಿವ್ಯಕ್ತಿಯೆ ಶರಣ ಸಾಹಿತ್ಯ. ಈ ಶರಣ ಸಾಹಿತ್ಯದಲ್ಲಿ ಅಭಿವ್ಯಕ್ತವಾಗಿರುವ ಶರಣರ ಬದುಕು ಹಾಗೂ ವಿಚಾರಗಳನ್ನು ತಕ್ಕ ವಿವೇಚನೆಯಿಂದ ಗ್ರಹಿಸುತ್ತ ಅವುಗಳಲ್ಲಿ ನಮಗೆ ಪ್ರಸ್ತುತವಾದದ್ದೆಷ್ಟು, ಅಪ್ರಸ್ತುತವಾದದ್ದೆಷ್ಟು ಎಂಬುದನ್ನು ಅರ್ಥಮಾಡಿಕೊಳ್ಳುವ ಮನೋಧರ್ಮವನ್ನು ನಾವಿನ್ನೂ ಬೆಳೆಯಿಸಿಕೊಳ್ಳಬೇಕಾಗಿದೆ.

*(ಚಿಕ್ಕಮಗಳೂರಿನಲ್ಲಿ ನಡೆದ ಅಖಿಲಭಾರತ ನಾಲ್ಕನೆಯ ಶರಣ ಸಾಹಿತ್ಯ ಸಮ್ಮೇಳನದಲ್ಲಿ ಶರಣ ಸಾಹಿತ್ಯದ ಪ್ರಸ್ತುತ ಚಿಂತನ ಗೋಷ್ಠಿಯಲ್ಲಿ ಮಾಡಿದ ಅಧ್ಯಕ್ಷ ಭಾಷಣ.)*

❖

ಮಾನವಪ್ರಜ್ಞೆ ಜಾಗೃತವಾಗದ ಹೊರತು ಇಂದಿನ ಸಮಸ್ಯೆಗಳಿಗೆ ಪರಿಹಾರ ಕಾಣದು.

– ಶ್ರೀವಾಣಿ

## ಭಾರತದ ರಾಷ್ಟ್ರಪತಿಗಳು

| ಕ್ರಮ ಸಂಖ್ಯೆ | ಹೆಸರು | ಅಧಿಕಾರದ ಅವಧಿ |
|---|---|---|
| | ಶ್ರೀಯುತರುಗಳಾದ : | |
| 1. | ಡಾ II ರಾಜೇಂದ್ರಪ್ರಸಾದ್ | 26-01-1950 ರಿಂದ 13-05-1962 |
| 2. | ಡಾ II ಎಸ್. ರಾಧಾಕೃಷ್ಣನ್ | 13-05-1962 ರಿಂದ 13-05-1967 |
| 3. | ಡಾ II ಜಾಕೀರ್ ಹುಸೇನ್ | 13-05-1967 ರಿಂದ 03-05-1969 |
| 4. | ವಿ.ವಿ. ಗಿರಿ (ಹಂಗಾಮಿ) | 03-05-1969 ರಿಂದ 20-07-1969 |
| 5. | ಮಹಮ್ಮದ್ ಹಿದಾಯತ್ ಉಲ್ಲಾ (ಹಂಗಾಮಿ) | 20-07-1969 ರಿಂದ 24-08-1969 |
| 6. | ವಿ.ವಿ. ಗಿರಿ | 24-08-1969 ರಿಂದ 24-08-1974 |
| 7. | ಫಕ್ರುದ್ದೀನ್ ಅಲಿ ಅಹಮ್ಮದ್ | 24-08-1974 ರಿಂದ 11-02-1977 |
| 8. | ಬಿ.ಡಿ. ಜತ್ತಿ (ಹಂಗಾಮಿ) | 11-02-1977 ರಿಂದ 25-07-1977 |
| 9. | ನೀಲಂ ಸಂಜೀವರೆಡ್ಡಿ | 25-07-1977 ರಿಂದ 25-07-1982 |
| 10. | ಗ್ಯಾನಿ ಜೇಲ್‌ಸಿಂಗ್ | 25-07-1982 ರಿಂದ 25-07-1987 |
| 11. | ಆರ್. ವೆಂಕಟರಾಮನ್ | 25-07-1987 ರಿಂದ 25-07-1992 |
| 12. | ಡಾ II ಶಂಕರ ದಯಾಳ್ ಶರ್ಮಾ | 25-07-1992 ರಿಂದ 25-07-1997 |
| 13. | ಕೆ.ಆರ್. ನಾರಾಯಣನ್ | 25-07-1997 ರಿಂದ |

## ಭಾರತದ ಉಪ ರಾಷ್ಟ್ರಪತಿಗಳು

| | | |
|---|---|---|
| 1. | ಡಾ II ಎಸ್. ರಾಧಾಕೃಷ್ಣನ್ | 1952 ರಿಂದ 1962 |
| 2. | ಡಾ II ಜಾಕೀರ್ ಹುಸೇನ್ | 1962 ರಿಂದ 1967 |
| 3. | ವಿ.ವಿ. ಗಿರಿ | 1967 ರಿಂದ 1969 |
| 4. | ಗೋಪಾಲ್ ಸ್ವರೂಪ್ ಪಾಠಕ್ | 1969 ರಿಂದ 1974 |
| 5. | ಬಿ.ಡಿ. ಜತ್ತಿ | 1974 ರಿಂದ 1979 |
| 6. | ಮಹಮ್ಮದ್ ಹಿದಾಯತ್ ಉಲ್ಲಾ | 1979 ರಿಂದ 1984 |
| 7. | ಆರ್. ವೆಂಕಟರಾಮನ್ | 1984 ರಿಂದ 1987 |
| 8. | ಡಾ II ಶಂಕರ್ ದಯಾಳ್ ಶರ್ಮಾ | 1987 ರಿಂದ 1992 |
| 9. | ಕೆ.ಆರ್. ನಾರಾಯಣನ್ | 1992 ರಿಂದ 1997 |
| 10. | ಕೃಷ್ಣಕಾಂತ್ | 1997 ರಿಂದ |





ಭಾಗ – ೨

# ಅಲ್ಲಮಪ್ರಭು

– ಲಿಂ. ಡಾ II ಎಚ್. ತಿಪ್ಪೇರುದ್ರಸ್ವಾಮಿ

ಸಾಯದೆ ನೋಯದೆ ಸ್ವತಂತ್ರವಾಗಿರುವ ನಿರ್ಲಿಪ್ತ ಮನೋಧರ್ಮ, ಈ ಲೋಕದಲ್ಲಿ ಇದ್ದೂ ಇಲ್ಲದ ಹಾಗೆ ಬಾಳುವ ರೀತಿ, ಸ್ಫಟಿಕದೊಳಗಣ ಘಟಪ್ರಭೆಯಂತೆ, ವಾಯುವಿನ ಸಂಚದ ಪರಿಮಳದ ನಿಲವಿನಂತೆ ಜೀವನ್ಮುಕ್ತನ ಸ್ಥಿತಿ – ಎಂದು ವರ್ಣಿಸಿದ್ದಾನೆ. ಅಲ್ಲಮನ ಈ ಅನುಭಾವದ ಮಟ್ಟವನ್ನು ಕಂಡು, ಸಾಧಕನ ತಲೆ ಅವನ ಮುಂದೆ ಗೌರವದಿಂದ ಬಾಗುತ್ತದೆ. ಶರಣರೆಲ್ಲರೂ ಹಾಗೆ ಅಲ್ಲಮನಿಗೆ ತಲೆಬಾಗಿರುವುದನ್ನೂ, ಆ ಜಾಜ್ವಲ್ಯಮಾನವಾದ ಸೂರ್ಯನಿಂದ ತಮ್ಮ ಹೃದಯವನ್ನು ಬೆಳಗಿಸಿಕೊಂಡು ಮನಸಾರೆ ಹಾಡಿಹೊಗಳಿರುವುದನ್ನೂ ಕಾಣುತ್ತೇವೆ. *''ರೂಪಿಲ್ಲದ ರೂಪ, ನಿಜವಿಲ್ಲದ ನಿಷ್ಪತ್ತಿ, ಸೀಮೆಯ ಮೀರಿದ ನಿಸ್ಸೀಮ, ಗಮನವಿಲ್ಲದ ಗಮ್ಯ, ನುಡಿಯಡಗಿದ ನಿಶ್ಶಬ್ದ, ಪರವನರಿಯದ ಪರಿಣಾಮಿ''* ಎಂದು ಅಲ್ಲಮನನ್ನು ವರ್ಣಿಸಿದ್ದಾನೆ ಚೆನ್ನಬಸವ.

ಅಲ್ಲಮ ದೇಹಿಯಾದರೂ ನಿರ್ದೇಹಿ. ಮೂರ್ತಿಯಾದರೂ ಶೂನ್ಯಮೂರ್ತಿ. ಈ ಶೂನ್ಯಮೂರ್ತಿ ಏರುವುದಕ್ಕೆ ಅರ್ಹವಾದ ಸಿಂಹಾಸನವನ್ನು ಬಸವೇಶ್ವರನು ನಿರ್ಮಿಸಿದ. *'ಶೂನ್ಯ ಸಿಂಹಾಸನ'* ಎಂದು ಕರೆದಿರುವ ಮಾತು ಬಹಳ ಅರ್ಥಗರ್ಭಿತವಾದುದು. ಶೂನ್ಯವೇ ಮೂರ್ತಿಗೊಂಡ ಸಿಂಹಾಸನ ಶೂನ್ಯವೆಂದರೆ ಸಾಮಾನ್ಯವಾದ ನಿಷೇದಾರ್ಥವಲ್ಲ. ಎಲ್ಲವನ್ನೂ ಒಳಗೊಂಡ ಪರಶಿವಬ್ರಹ್ಮನೇ ಶೂನ್ಯ. ಎಲ್ಲವನ್ನೂ ಸೇರಿಸಿಕೊಂಡು ಎಲ್ಲಕ್ಕೂ ಅತೀತವಾಗಿ ತಾನೇ ತಾನಾದ ನಿರಾಲಂಬ ಶೂನ್ಯ. ಈ ಅರ್ಥದಲ್ಲಿ ಅಲ್ಲಮಪ್ರಭು ಪರಿಪೂರ್ಣನು. ಮಡಿವಾಳ ಮಾಚಯ್ಯ ಅಲ್ಲಮನನ್ನು ಕುರಿತು:

*ಲಿಂಗ ಬೆಳಗಿನ ಪರಮ ಸುಖಿಯನೇನೆಂಬೆನಯ್ಯಾ*
*ಕಂಗಳ ಕಳೆಯ ಸಂಗವನರಿದ ಅಂಗವಿರಹಿತನೇನೆಂದು ಉಪಮಿಸುವೆನು*
*ನೋಟದಲ್ಲಿ ಅನಿಮಿಷ, ಕೂಟದಲ್ಲಿ ನಿಸ್ಸಂಗಿ, ಎಡೆಯಾಟದಲ್ಲಿ ನಿರ್ಗಮನ,*
*ನಿಂದಲ್ಲಿ ನಿರಾಳ, ಸುರಾಳದಲ್ಲಿ ಪರಿಪೂರ್ಣ,*
*ಘನಕ್ಕೆ ಘನಮಹಿಮ, ಕಲಿದೇವರ ದೇವಾ,*
*ನಿಮ್ಮ ಶರಣ ಪ್ರಭುದೇವರ ಪಾದಕ್ಕೆ ನಮೋ ನಮೋ.*

ಎಂಬುದಾಗಿ ಹೇಳುತ್ತಾನೆ. ಅಲ್ಲಮನ ಶಿವಾದ್ವೈತದ ಮಟ್ಟವನ್ನು ಶರಣರು ಹೇಗೆ ಗುರುತಿಸಿದ್ದಾರೆಂಬುದು ಈ ಮಾತುಗಳಿಂದ ವ್ಯಕ್ತವಾಗುತ್ತದೆ.

ಆತನು ಹೇಳುವ ಅದ್ವೈತದ ಆ ಕೇವಲ ಸ್ಥಿತಿಯನ್ನು, ಮತ್ತು ಆ ಸ್ಥಿತಿಯಲ್ಲಿ ನಡೆಸುವ ವಿಶ್ವಪೂಜೆಯ ವೈಭವವನ್ನು ಇನ್ನೂ ಕೆಲವು ವಚನಗಳ ಮೂಲಕ ಹೆಚ್ಚು ಹತ್ತಿರದಿಂದ ಪಡೆಯಲು ಯತ್ನಿಸಬಹುದು.

*ಕರ್ಪೂರದ ಗಿರಿಯನುರಿ ಹಿಡಿದ ಬಳಿಕ ಇದ್ದಿಲುಂಟೆ?*
*ಕೆಂಡದ ಗಿರಿಯ ಅರಗಿನ ಬಾಣದಲೆಚ್ಚಡೆ*
*ಮರಳಿ ಬಾಣವನರಸಲುಂಟೆ?*
*ಗುಹೇಶ್ವರಲಿಂಗವನರಿದ ಬಳಿಕ ದೇವರೆಂದು ಅರಸಲುಂಟೆ?*

ತನ್ನನ್ನು ತಾನು ಅರಿತಮೇಲೆ ತಾನೆಂಬುದೂ ಅಲ್ಲಿ ಉಳಿಯದು. ಕರ್ಪೂರದ ಪರ್ವತವನ್ನು ಉರಿಕೊಂಡ ಹಾಗೆ, ಉರಿಯ ಪರ್ವತಕ್ಕೆ ಅರಗಿನ ಬಾಣದಿಂದ ಹೊಡೆದ ಹಾಗೆ, *''ಮಂಜಿನ ಪರ್ವತಕ್ಕೆ ಬಿಸಿಲಿನ ಕಳಶವನ್ನಿಟ್ಟಂತೆ''* (ಎಂದು ಇನ್ನೊಂದು ಕಡೆ ಹೇಳಿದ್ದಾನೆ).

*ಮರದೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯಾ;*
*ಬಯಲಗಾಳಿಯ ಪರಿಮಳ ನಾಸಿಕವನಪ್ಪಿದಂತಾದೆನಯ್ಯಾ;*
*ಕರುವಿನ ಬೊಂಬೆಯನುರಿಕೊಂಡಂತಾದೆನಯ್ಯಾ;*
*ಗುಹೇಶ್ವರಲಿಂಗವ ಪೂಜಿಸಿ ಭವಗೆಟ್ಟೆನಯ್ಯಾ.*

ನನ್ನಲ್ಲಿರುವ ಚೈತನ್ಯ ಶಕ್ತಿಯೇ ನನ್ನನ್ನು ಆವತರಿಸಿ, ತನ್ನಲ್ಲಿ ಲೀನಗೊಳಿಸಿಕೊಂಡಿತು. ಬೆಳಕು ಕತ್ತಲೆಯನ್ನು ನುಂಗಿದಂತಾಯಿತು – ಎಂದು ಹೇಳಿದ್ದಾನೆ ಒಂದು ಕಡೆ.

*ಸ್ವಸ್ಥಾನ ಸುಸ್ಥಿರದ ಸುಮನ ಮಂಟಪದೊಳಗೆ*
*ನಿತ್ಯನಿರಂಜನ ಪ್ರಭೆಯ ಬೆಳಗು,*
*ಶಿವಯೋಗದನುಭಾವ ಏಕಾರ್ಥವಾಗಿ, ಗುಹೇಶ್ವರಾ*
*ನಿಮ್ಮ ಶರಣನು ಅನುಪಮ ಸುಖಿಯಾಗಿರ್ದನು*

ಅಪಾರವಾದ ಅನುಭವವನ್ನು ಸೂತ್ರರೂಪವಾಗಿ ವಚನದಲ್ಲಿ ಹಿಡಿದಿಡುವ ಅಲ್ಲಮನ ಅದ್ಭುತಶಕ್ತಿಯನ್ನು ಈ

ಮೇಲಿನ ವಚನದಲ್ಲಿ ಕಾಣಬಹುದು. ಇದರ ವಿವರಣೆಗೆ ಕೈಯಿಟ್ಟರೇ ಆ ಅಖಂಡ ಅನುಭವವನ್ನು ಕತ್ತರಿಸಿದಂತಾಗುತ್ತದೆ.

ಇಂತಹ ಸಿದ್ಧ ಕೈಕೊಳ್ಳುವ ಪೂಜೆಯಾದರೂ ಎಂಥದು, ಆ ವಿಶ್ವಪೂಜೆಯ ವೈಭವವನ್ನು ಅಲ್ಲಮನ ಬಾಯಿಂದಲೇ ಕೇಳಬೇಕು.

*ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ,*
*ಆಕಾಶಗಂಗೆಯಲ್ಲಿ ಮಜ್ಜನ,*
*ಹೂವಿಲ್ಲದ ಪರಿಮಳದ ಪೂಜೆ,*
*ಹೃದಯಕಮಲದಲ್ಲಿ ಶಿವಶಿವ ಎಂಬ ಶಬ್ದ*
*ಇದು ಅದ್ವೈತ ಕಾಣಾ ಗುಹೇಶ್ವರಾ.*

*ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯ,*
*ನಿರಾಳಲಿಂಗಕ್ಕೆ ಬಯಲೇ ಸೆಜ್ಜೆ,*
*ವಾಯುವೇ ಶಿವದಾರ, ಬೆಳಗೆ ಸಿಂಹಾಸನ,*
*ಆತ್ತಲಿತ್ತ ಚಿತ್ತವ ಹರಿಯಲೀಯದೆ*
*ಮಜ್ಜನಕ್ಕೆರೆದು ಸುಖಿಯಾದೆ ಗುಹೇಶ್ವರಾ.*

*ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ,*
*ಚಂದ್ರ, ಸೂರ್ಯರಿಬ್ಬರು ಪುಷ್ಪ,*
*ಬ್ರಹ್ಮಧೂಪ, ವಿಷ್ಣುದೀಪ,*
*ರುದ್ರನೋಗರ, ಸುಯಿಧಾನ ನೋಡಾ !*
*ಗುಹೇಶ್ವರಲಿಂಗಕ್ಕೆ, ಪೂಜೆ ನೋಡಾ !*

ಅಲ್ಲಮಪ್ರಭುವಿನ ಇಂತಹ ವಚನಗಳ ಭವ್ಯವಾದ ಬೆಳಕಿನಿಂದ, ನಮ್ಮ ಕಲ್ಪನೆ ಕಣ್ಣು ಮುಚ್ಚುತ್ತದೆ. ಬುದ್ಧಿ ದಿಗ್ಭ್ರಮೆಗೊಳ್ಳುತ್ತದೆ. ಅನುಭಾವ ಆ ಎತ್ತರಕ್ಕೆ ಏರಲಾರದೆ ನಡುಗುತ್ತದೆ. ಆದರೆ ಸಾಧಕ ಆ ಮಾರ್ಗದಲ್ಲಿ ನಡೆಯತೊಡಗಿದಂತೆಲ್ಲಾ ಅವುಗಳ ಅರ್ಥ ಹೆಚ್ಚು ಹೆಚ್ಚು ಹತ್ತಿರವಾಗುತ್ತದೆ.

ಹೀಗೆ ಅನುಭಾವದ ಆ ಉತ್ತುಂಗ ಶಿಖರದಲ್ಲಿಯೇ ಸದಾಕಾಲವೂ ನಿವಾಸಿಯಾಗಿ ನಿಲ್ಲಬಲ್ಲ ಪ್ರಭು, ಜಗತ್ತಿನ ಹಿತಕ್ಕಾಗಿ ಅಲ್ಲಿಂದ ಮತ್ತೆ ಇಳಿದುಬಂದು, ಸಾಧಕರನ್ನು ಎತ್ತಲು ಕೈಚಾಚುವುದನ್ನು ಕಂಡಾಗ ಆತನ ಲೋಕಾನುಕಂಪೆಯ ಅರಿವು ನಮಗಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಕಲ್ಯಾಣಕ್ಕೆ ಬಂದು ಬಸವಣ್ಣನವರ ಕಾರ್ಯಕ್ಷೇತ್ರದಲ್ಲಿ ಹೆಗಲುಕೊಟ್ಟು ನಿಲ್ಲುವುದನ್ನು ನೋಡಿದಾಗಲಂತೂ ಆ ಎರಡು ಮಹಾಶಕ್ತಿಗಳ ಸಂಗಮದಿಂದ ಪುಲಕಿತರಾಗುತ್ತೇವೆ. ಅಲ್ಲಮನ ಅದ್ಭುತ ದಿವ್ಯಶಕ್ತಿಗಳ ಸದ್ವಿನಿಯೋಗಕ್ಕೆ, ಕಲ್ಯಾಣ ಅಂದು ಒಳ್ಳೆಯ ಕೇಂದ್ರವಾಗಿತ್ತು. ಬಹುಮುಖವಾದ ಆತನ ವ್ಯಕ್ತಿತ್ವದ ಸಮಗ್ರ ಪರಿಚಯ ಅಲ್ಲಿ ಕಂಡುಬರುತ್ತದೆ. ಅದರ ಒಂದೆರಡು ಅಂಶಗಳನ್ನು ಮಾತ್ರ ಬಹಳ ಸಂಕ್ಷೇಪವಾಗಿ ಇಲ್ಲಿ ನೋಡಬಹುದು.

## ೩. ಕಲ್ಯಾಣದಲ್ಲಿ ಅಲ್ಲಮಪ್ರಭು

ಅಲ್ಲಮಪ್ರಭು ಬರುವ ವೇಳೆಗೆ ಕಲ್ಯಾಣದ ಕಾರ್ಯಕ್ಷೇತ್ರ ವ್ಯಾಪಕವಾಗಿ ಬೆಳೆದಿತ್ತು. ಆಧ್ಯಾತ್ಮಿಕ ಕ್ರಾಂತಿಯ ಮಹಾಪೂರ ಬಸವಣ್ಣನವರ ಮಹಾಮನೆಯಿಂದ ಹೊರಹೊಮ್ಮಿ ಕರ್ನಾಟಕವನ್ನು ಮಾತ್ರವಲ್ಲದೆ ದೂರದ ನಾಡುಗಳವರೆಗೂ ಹರಿದಿತ್ತು. ಸಾಮಾಜಿಕ, ಧಾರ್ಮಿಕ ಮತ್ತು ಆಧ್ಯಾತ್ಮಿಕ ರಂಗಗಳಲ್ಲಿ ಬಸವಣ್ಣನವರು ಬಿತ್ತುತ್ತಿದ್ದ ವಿಶಾಲವಾದ ಹೊಸ ಭಾವನೆಗಳು ಜೀವನದ ಅನೇಕ ರಂಗಗಳಿಂದ ಜನರನ್ನು ಆಕರ್ಷಿಸುತ್ತಿದ್ದುವು. ಆದರೆ ಸಂಪ್ರದಾಯವಾದಿಗಳಿಗೆ ಇದು ಹಿಡಿಸದೆ ಹೆಜ್ಜೆಹೆಜ್ಜೆಗೂ ಅವರು ಅಡ್ಡಿ ಆತಂಕಗಳನ್ನು ಒಡ್ಡುತ್ತಿದ್ದರು. ಇದರ ಜತೆಗೆ ಬಸವಣ್ಣನವರ ಭಕ್ತಿಮನೋಧರ್ಮದ ಮುಗ್ಧಮನಸ್ಸನ್ನು ಕಂಡು ಅದರ ದುರುಪಯೋಗವನ್ನು ಮಾಡಿಕೊಳ್ಳುತ್ತಿದ್ದ ಧಾರ್ಮಿಕ ವೇಷಧಾರಿಗಳಿಗೂ ಕಡಿಮೆ ಇರಲಿಲ್ಲವೆಂದು ತೋರುತ್ತದೆ. ಇದೆಲ್ಲವನ್ನೂ ನಿಯಂತ್ರಿಸಿ ಬಸವಣ್ಣನವರಿಗೆ ಬೆಂಬಲವಾಗಿ ನಿಲ್ಲಬಲ್ಲ ಒಂದು ಅಚಲ ಶಕ್ತಿಯ ನೆರವು ಅಗತ್ಯವಾಗಿತ್ತು. ಅಂತಹ ಸಮಯದಲ್ಲಿ ಅಲ್ಲಮಪ್ರಭುವಿನ ಆಗಮನವಾಯಿತು ಕಲ್ಯಾಣಕ್ಕೆ.

ಆಗ ಅಲ್ಲಮಪ್ರಭು ಸೊನ್ನಲಾಪುರದಿಂದ ಕರ್ಮಯೋಗಿ ಸಿದ್ಧರಾಮನನ್ನು ಕರೆದುಕೊಂಡು ಅಲ್ಲಿಗೆ ಬಂದಂತೆ ತಿಳಿದುಬರುತ್ತದೆ. ಸಿದ್ಧರಾಮನಿಗೆ ಶಿವಯೋಗದ ಪೂರ್ಣ ಸ್ವರೂಪವನ್ನು ಅನುಭಾವಪೂರ್ವಕವಾಗಿ ಉಂಟುಮಾಡಿಕೊಡುವುದಕ್ಕಲ್ಲದೆ, ಶರಣರ ಕಾರ್ಯಕ್ಷೇತ್ರವನ್ನು ಪರಿಚಯಿಸಿ ಕೊಡುವುದೂ ಪ್ರಭುವಿನ ಉದ್ದೇಶವಿದ್ದಂತೆ ತೋರುತ್ತದೆ : *"ಶರಣರ ಅಂತರಂಗದಲ್ಲಿ ಶಿವನಿಪ್ಪನು, ಆ ಶಿವನಿದ್ದಲ್ಲಿ ಕೈಲಾಸವಿಪ್ಪುದು"* ಎನ್ನುವಾಗ ಮತ್ತು *"ಶರಣ ಸಂಗನ ಬಸವಣ್ಣನ ಅಂಗಳವ ಕಂಡೆನಾಗಿ ಗುಹೇಶ್ವರಲಿಂಗಕ್ಕೆ ಕಂಗಳ ತೃಪ್ತಿಯಾಯಿತ್ತು ಕಾಣಾ ಸಿದ್ಧರಾಮಯ್ಯ"* ಎಂದು ಬಸವಣ್ಣನವರ ಮಹಾಮನೆಯ ಮಹತ್ವವನ್ನು ಸೂಚಿಸುವಾಗ ಈ ಭಾವನೆಯನ್ನು ಕಾಣುತ್ತೇವೆ. ಇನ್ನೊಂದು ಕಡೆಯಲ್ಲಿ ಪ್ರಭುದೇವ ಕಲ್ಯಾಣವನ್ನು ಸುಂದರವಾದ ಈ ಸಾದೃಶ್ಯದಿಂದ ಹೊಗಳಿದ್ದಾನೆ:





*ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು*
*ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು*
*ತೊಳಗಿ ಬೆಳಗುತ್ತಿರ್ದುದಯ್ಯ ಶಿವನ ಪ್ರತಾಪ*
*ಆ ಬೆಳಗಿನೊಳಗೆ ಒಪ್ಪುತ್ತಿರ್ದರಯ್ಯ ಅಸಂಖ್ಯಾತ ಭಕ್ತಗಣಂಗಳು*

........................

ಎಂದು ಮುಂತಾಗಿ ವರ್ಣಿಸಿದ್ದಾನೆ ಅಲ್ಲಮಪ್ರಭು. ಇಂತಹ ಕಲ್ಯಾಣ ಪಟ್ಟಣವನ್ನು ಪ್ರವೇಶಿಸಿ, ಇಬ್ಬರೂ ಬಸವಣ್ಣನವರ ಮಹಾಮನೆಗೆ ದೂರದಿಂದಲೇ ನಮಸ್ಕರಿಸುತ್ತಾ, ಆ ಮನೆಯ ದ್ವಾರವಟ್ಟದ ಮುಂದೆ ಬಂದು ನಿಲ್ಲುತ್ತಾರೆ.

ಇದೊಂದು ಅದ್ಭುತವಾದ ಸನ್ನಿವೇಶ. ವೈರಾಗ್ಯದ ಮಹಾಸಾಗರ ತಾನೇ ಆರಸಿಕೊಂಡು ಬಂದು ಭಕ್ತಿತರಂಗಿಣಿಯ ಸಂಗಮಕ್ಕಾಗಿ ಕಾದು ನಿಂತಿದೆ. ಈ ಸನ್ನಿವೇಶವನ್ನು ಶೂನ್ಯ ಸಂಪಾದನೆ ಬಹಳ ಚಿತ್ರಿಸಿದೆ. ಇಲ್ಲಿ ಬಸವಣ್ಣನವರ ಭಕ್ತಿ ಮನೋಭಾವ, ಪ್ರಭುದೇವನ ನಿಷ್ಠುರತೆಯ ಹಿಂದಿರುವ ಆಧ್ಯಾತ್ಮಿಕ ಜಾಗೃತಿಯ ನಿರಂತರ ನಿಷ್ಠೆ ಇವುಗಳು ಚೆನ್ನಾಗಿ ವ್ಯಕ್ತವಾಗಿವೆ.

ಇಷ್ಟಲಿಂಗದ ಪೂಜೆಯಲ್ಲಿ ತಲ್ಲೀನರಾಗಿದ್ದ ಬಸವಣ್ಣನವರು ತಮ್ಮ ಮಹಾಮನೆಯ ಬಾಗಿಲಲ್ಲಿ ನಿಂತ ಪ್ರಭುವನ್ನು ಸ್ವಾಗತಿಸುವುದರಲ್ಲಿ ಸ್ವಲ್ಪ ಉದಾಸೀನವನ್ನು ತೋರಿಸುತ್ತಾರೆ. ಆದರೆ ಬಂದ ಮಹಾಂತ ಜಂಗಮಮೂರ್ತಿ ಯಾರೆಂದು ತಿಳಿದೊಡನೆಯೇ ಪಶ್ಚಾತ್ತಾಪದಿಂದ ನಡುಗುತ್ತಾ ಅಲ್ಲಮನ ಬಳಿಗೆ ಓಡಿಬರುತ್ತಾರೆ ಬಸವಣ್ಣನವರು. ಆದರೆ ಅವರನ್ನು ಒರೆಗೆ ಹಚ್ಚಿ ನೋಡಿ ಪರೀಕ್ಷಿಸಬೇಕೆಂಬುದೇ ಪ್ರಭುವಿನ ಉದ್ದೇಶ. ಬೇಕೆಂದೇ ಕಠಿಣವಾಗಿ ಬಸವಣ್ಣನವರನ್ನು ಟೀಕಿಸಿ ನುಡಿಯುತ್ತಾನೆ. *"ಬಂದ ಬರವ ನೋಡದೆ, ನಿಂದ ನಿಲವನರಿಯದೆ, ಕೆಮ್ಮನೆ ಅಹಂಕಾರವ ಹೊತ್ತಿರ್ಪವರ ನಮ್ಮ ಗುಹೇಶ್ವರಲಿಂಗನೊಲ್ಲ ಕಾಣಾ"* ಮತ್ತು *"ಮಾಟಕೂಟವೆಂಬ ಕೀರ್ತಿಗೆ ಸಿಲುಕಿ, ಜಂಗಮವೇ ಲಿಂಗವೆಂಬುದ ಮರೆದೆಯಲ್ಲಾ ಬಸವಾ ! ಗುಹೇಶ್ವರನ ಶರಣರಿಗೆ ತ್ರಿಕರಣವನೊಪ್ಪಿಸಿದಲ್ಲದೆ ಭಕ್ತನಾಗಬಾರದು ಕಾಣಾ ಸಂಗನ ಬಸವಣ್ಣಾ'.* ಅಹಂಕಾರವನ್ನು ಹೊತ್ತು, ಕೀರ್ತಿಗೆ ಮರುಳಾಗಿ, ನೀನು ಲಿಂಗ ಜಂಗಮಗಳನ್ನು ಮರೆತಿದ್ದೀಯೆ ಎಂದು ಎಚ್ಚರಿಸುತ್ತಾನೆ. ಅತೀವ ಪಶ್ಚಾತ್ತಾಪದಿಂದ ಬಸವಣ್ಣನವರು ಪ್ರಾರ್ಥಿಸಿಕೊಳ್ಳಲು ಆಗ ಅಲ್ಲಮಪ್ರಭು ತನ್ನ ತೋರಿಕೆಯ ಕೋಪವನ್ನು ಅಡಗಿಸಿಕೊಳ್ಳುತ್ತಾನೆ. ಆ ಹುಸಿಕೋಪಕ್ಕೆ ಕಾರಣವನ್ನು ಹೇಳುವ ಆತನ ಮಾತು ಮನನೀಯವಾಗಿದೆ. *"ನಮ್ಮ ಗುಹೇಶ್ವರ ಲಿಂಗದಲ್ಲಿ ನೀನೇ ಭಕ್ತನಾದ ಕಾರಣ ಮುಳಿಸು ಮೊಳೆದೋರಿತ್ತು ಕಾಣಾ ಸಂಗನ ಬಸವಣ್ಣಾ !"* ಬಸವಣ್ಣ ನಿಜವಾದ ಭಕ್ತನಾದುದರಿಂದ ಅವನು ತಪ್ಪಿ ನಡೆಯುವುದನ್ನು ಪ್ರಭು ಸಹಿಸಲಾರ. ಈ ಸಂದರ್ಭದಲ್ಲಿ ಒಂದು ಅರ್ಥವತ್ತಾದ ಸಾದೃಶ್ಯವನ್ನು ಕೊಟ್ಟು ಅಲ್ಲಮಪ್ರಭು ಅದನ್ನು ಸ್ಪಷ್ಟಪಡಿಸಿದ್ದಾನೆ :

*ಸೂಳೆ ಹಲಬರನುರುಳಿದಳೆಂದು ನಿಂದಿಸುವರಿಲ್ಲ ಕೇಳು !*
*ಪತಿವ್ರತೆ ತನ್ನ ಪುರುಷನಲ್ಲದೆ ಮತ್ತೊಬ್ಬನ ಮುಖವ ನೋಡಿದರೆ*
*ಆವಳ ಚಂಡಾಲಗಿತ್ತಿ ಎಂಬರು ಲೋಕವೆಲ್ಲವು*
*ಕೀರ್ತಿವಾರ್ತೆಗೆ ಮಾಡುವ ಭಕ್ತ ತಪ್ಪಿದರೆ ಆದರ ಮನಕ್ಕೆ ತರಲಿಲ್ಲ*
*ಸಜ್ಜನ ಸದ್ಭಕ್ತನೆಡಹಿದರೆ, ಆದ ಸೈರಿಸಬಾರದು ಕೇಳು*
*ನಮ್ಮ ಗುಹೇಶ್ವರ ಲಿಂಗಕ್ಕೆ ಆದಿಯಿಂದತ್ತ ನೀನೇ ಭಕ್ತನಾದ ಕಾರಣ*
*ಮನನೊಂದಿತ್ತು ಕಾಣಾ ಸಂಗನ ಬಸವಣ್ಣಾ !*

ಪತಿವ್ರತೆಯರಾದವರು ಅತ್ತಿತ್ತ ಕಣ್ಣುಹರಿಸಿದರೆ ಲೋಕ ನಿಂದಿಸುತ್ತದೆಯೇ ಹೊರತು ವೇಶ್ಯೆಯನ್ನು ಅದಕ್ಕಾಗಿ ನಿಂದಿಸುವುದಿಲ್ಲ. ಚಂಚಲಚಿತ್ತದ ಅಜ್ಞಾನಿಗಳು ಮರವೆಗೆ ಒಳಗಾಗುವಂತೆ ನಿನ್ನಂತಹ ಏಕೈಕನಿಷ್ಠೆಯ ಭಕ್ತನು ಜಂಗಮದ ಉದಾಸೀನಕ್ಕೆ ಒಳಗಾಗಿ ಭಕ್ತಿಯನ್ನು ಮರೆತರೆ, ನಾನು ಅದನ್ನು ಸೈರಿಸಲಾರೆ. ಅರಿತವರೇ ಮರೆತು ನಡೆದರೆ ಅರಿವು ಬದುಕುವುದು ಹೇಗೆ? ಅದಕ್ಕಾಗಿ ನಾನು ಕೋಪಗೊಳ್ಳಬೇಕಾಯಿತು – ಎಂದು ಪ್ರಭುದೇವ ತನ್ನ ಕೋಪದ ಹಿಂದಿರುವ ಕಾರಣವನ್ನು ಸ್ಪಷ್ಟಪಡಿಸುತ್ತಾನೆ.

ಬಸವಣ್ಣನವರು ಅನನ್ಯಭಾವದಿಂದ ಆತನಿಗೆ ಶರಣಾಗುತ್ತಾರೆ. ತಮ್ಮ ಕಾರ್ಯಕ್ಕೆ ಬೆಂಬಲವಾಗಿ ನಿಲ್ಲುವಂತೆ ಅಲ್ಲಮನನ್ನು ಪ್ರಾರ್ಥಿಸುತ್ತಾರೆ. ಆ ಪ್ರಾರ್ಥನೆ ಈಡೇರುತ್ತದೆ. ಅನುಭವ ಮಂಟಪದಲ್ಲಿ ಪ್ರಮುಖವಾದ ಸ್ಥಾನವನ್ನು ವಹಿಸಿದುದು ಅನುಭವಗೋಷ್ಠಿಗಳಿಗೊಂದು ಹೊಸ ಚೈತನ್ಯ ಬಂದಂತಾಗುತ್ತದೆ.

ಶರಣರ ಕಾರ್ಯಕ್ಷೇತ್ರದಲ್ಲಿ ಅನುಭವಮಂಟಪದ ಸ್ಥಾನ ಹಿರಿದಾದುದು ಮತ್ತು ಮಹತ್ವಪೂರ್ಣವಾದುದು. ಬಸವಣ್ಣನವರು ಯಾವುದನ್ನೂ ಕುರುಡು ನಂಬಿಕೆಯಿಂದ ಒಪ್ಪಿಕೊಳ್ಳುವಂತೆ ಬೋಧಿಸಿದವರಲ್ಲ. ಅವರದು ವಿಚಾರ ಪ್ರಧಾನವಾದ ಮಾರ್ಗ. ಯಾರೋ ಹೇಳಿದರೆಂದಾಗಲೀ ಅಥವಾ ಯಾವುದೇ ಗ್ರಂಥದಲ್ಲಿ ಉಕ್ತವಾಗಿದೆಯೆಂದಾಗಲೀ

ಒಪ್ಪಕೊಳ್ಳದೆ ಒಂದು ತತ್ವದ ಯೋಗ್ಯತೆಯನ್ನು ಸ್ವತಂತ್ರ ವಿಚಾರಶಕ್ತಿಯಿಂದ ಪರಿಶೀಲಿಸಬೇಕು. ವ್ಯಕ್ತಿ ಮತ್ತು ಸಮಾಜಗಳ ಹಿತಕ್ಕೆ ಕಾರಣವಾದುವುಗಳನ್ನು ಮಾತ್ರ ಅಂಗೀಕರಿಸಬೇಕು. ಧರ್ಮದ ಮೂಲಭೂತವಾದ ಆದರ್ಶಗಳೂ ತತ್ವಗಳೂ ಚಿರಂತನವಾದವುಗಳೇನೋ ಹೌದು. ಆದರೆ ಸಮಾಜ ನಿತ್ಯಪರಿವರ್ತನಶೀಲವಾದುದರಿಂದ ಸಮಸ್ಯೆಗಳು ಕಾಲಕಾಲಕ್ಕೆ ಬದಲಾಗುತ್ತದೆ. ಧರ್ಮವು ಆ ಹೊಸ ಪರಿಸ್ಥಿತಿಗೆ ಅನುಗುಣವಾಗಿ ಅಳವಟ್ಟು ವ್ಯಕ್ತಿಯ ಉದ್ಧಾರವನ್ನು ಸಾಧಿಸುವಂತಿರಬೇಕು-ಎಂಬ ಈ ಹೊಸ ವಿಚಾರಧಾರೆಯನ್ನು ಬಸವಣ್ಣನವರು ತಮ್ಮದೇ ಆದ ಒಂದು ರೀತಿಯಲ್ಲಿ ಜನತೆಯ ಮುಂದೆ ಇಟ್ಟರು ಮತ್ತು ಅವುಗಳನ್ನು ಚರ್ಚಿಸಿ, ಅನುಷ್ಠಾನಕ್ಕೆ ತರಲು ಅವಕಾಶ ಮಾಡಿಕೊಟ್ಟರು. ಅಂತಹ ಚರ್ಚೆಗಳು ನಡೆಯುತ್ತಿದ್ದ ಸ್ಥಳವೇ ಅನುಭವ ಮಂಟಪ.

ಪ್ರಮುಖ ಸಾಮಾಜಿಕ ಸಮಸ್ಯೆಗಳಿಂದ ಹಿಡಿದು ವ್ಯಕ್ತಿಯ ಅತ್ಯಂತ ಆಂತರಂಗಿಕವಾದ ಅನುಭಾವದವರೆಗೂ ಇರುವ ಬಹುಮುಖವಾದ ವಿಷಯಗಳ ಮಥನ ಅಲ್ಲಿ ನಡೆಯುತ್ತಿತ್ತು. ಅದು ಭರತಖಂಡದ ಅನೇಕ ಭಾಗಗಳಿಂದ ಜನರನ್ನು ಆಕರ್ಷಿಸಿತು. ಇದರ ಕೀರ್ತಿಯನ್ನು ಕೇಳಿ ಆಂಧ್ರ, ಚೋಳ, ಚೇರ, ಗೂರ್ಜರ, ಕಳಿಂಗ, ಕಾಶ್ಮೀರ ಮೊದಲಾದ ದೇಶಗಳಿಂದ ಸಾಧಕರು ಆಕರ್ಷಿತರಾಗಿ ಕಲ್ಯಾಣಕ್ಕೆ ಬಂದರು ಎಂಬ ಮಾತು ಕಾವ್ಯಗಳಲ್ಲಿ ಬರುತ್ತದೆ. ಕಾಶ್ಮೀರದಿಂದ ಬಂದ ರಾಜ ಮಹಾದೇವ ಭೂಪಾಲ, ಮೋಳಿಗೆಯ ಮಾರಯ್ಯನಾಗಿ ನೆಲಸಿದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಹಾಗೆಯೇ ದಕ್ಷಿಣ ದೇಶದಲ್ಲಿ ರಾಜನಾಗಿದ್ದವನು ಸಕಲೇಶ ಮಾದರಸ. ಕಳಿಂಗ ದೇಶದಿಂದ ಮರುಳುಶಂಕರದೇವ, ಆಂಧ್ರಪ್ರದೇಶದಿಂದ ಮೈದುನ ರಾಮಯ್ಯ, ಉರಿಲಿಂಗಪೆದ್ದಿ ಈ ಮೊದಲಾದ ಸಾಧಕರು ಬಂದು ಅನುಭವ ಮಂಟಪದ ನೆರಳಿನಲ್ಲಿ ಬೆಳೆದು ಶರಣರಾದರು.

ಜಾತಿ ಕುಲಗಳ ಅಂತರವಿಲ್ಲದೆ, ಸ್ತ್ರೀಪುರುಷರೆಂಬ ಭೇದವಿಲ್ಲದೆ, ಮೇಲು ಕೀಳುಗಳೆಂಬ ತಾರತಮ್ಯವಿಲ್ಲದೆ ಎಲ್ಲರಿಗೂ ಅಲ್ಲಿ ಸರ್ವಸಮಾನ ಸ್ಥಾನದಲ್ಲಿ ಕುಳಿತು ಆಧ್ಯಾತ್ಮಿಕ ಚರ್ಚೆಗಳನ್ನು ನಡೆಸುತ್ತಿದ್ದರು. ಮಡಿವಾಳ ಮಾಚಯ್ಯ, ಮೇದರ ಕೇತಯ್ಯ, ಅಂಬಿಗರ ಚೌಡಯ್ಯ, ಹಡಪದ ಅಪ್ಪಣ್ಣ, ತುರುಗಾಹಿ ರಾಮಣ್ಣ, ನುಲಿಯ ಚಂದಯ್ಯ, ಕೊಟ್ಟಣದ ರೆಮ್ಮವ್ವೆ ಎಂದು ಮುಂತಾಗಿ ಕಾಯಕ ಜೀವಿಗಳಾದ ಅನೇಕ ಶರಣರನ್ನು ಉದಾಹರಿಸಬಹುದು.

ಹೀಗೆ ದೇಶದ ಎಲ್ಲ ಭಾಗಗಳಿಂದಲೂ, ಜೀವನದ ಎಲ್ಲ ರಂಗಗಳಿಂದಲೂ ಬಸವಣ್ಣನವರ ಕಾರ್ಯಕ್ಷೇತ್ರಕ್ಕೆ ಬಂದು, ಆಧ್ಯಾತ್ಮ ಸಾಧನೆಯಲ್ಲಿ ಸೇರಿದ ಅನುಭಾವಿಗಳ ಗೋಷ್ಠಿಗೆ ಅಲ್ಲಮಪ್ರಭುವಿನಂತಹ ಮಹಾ ಅನುಭಾವಿಯು ಮಾರ್ಗದರ್ಶಕ ಶಕ್ತಿಯಾಗಿ ದೊರೆತುದು ಬಸವಣ್ಣನವರ ಹಾರೈಕೆಯ ಫಲ ಮತ್ತು ಶರಣರ ಪುಣ್ಯದ ಬಲ ಎನ್ನಬಹುದು. ಬಸವಣ್ಣನವರು ಕಂಡ ಮಹತ್ತರವಾದ ಧಾರ್ಮಿಕ ಆದರ್ಶಗಳ ಕನಸು ಪ್ರಭುದೇವನ ನೇತೃತ್ವದಲ್ಲಿ, ಅನುಭವ ಮಂಟಪದ ಮೂಲಕ ಕಾರ್ಯಗತವಾಗತೊಡಗಿತು.

ಸತ್ಯವನ್ನು ನಿಷ್ಠುರವಾಗಿ ಸಾರಿ ಸಾಧಕರನ್ನು ಚುಚ್ಚಿ ಎಚ್ಚರಿಸುವ ಅಲ್ಲಮಪ್ರಭುವಿನಂತಹ ವ್ಯಕ್ತಿ ಆಗ ಆವಶ್ಯಕವಾಗಿ ಬೇಕಾಗಿತ್ತು. ಬಸವಣ್ಣನವರದು ಬಹಳ ಸರಳವಾದ ಮನೋಧರ್ಮ; ಬೆಳ್ಳಗಿರುವುದೆಲ್ಲ ಹಾಲೆಂದು ನಂಬುವಂತಹುದು. ಅದು ಅವರ ಮಾರ್ಗದಲ್ಲಿ ಅನೇಕವೇಳೆ ಅಡ್ಡಿ ಆತಂಕಗಳನ್ನು ತಂದು ಒಡ್ಡುತ್ತಿದ್ದಿತೆಂದು ತೋರುತ್ತದೆ. ಆದರೆ ಅಲ್ಲಮಪ್ರಭು ಬಂದುದು ಬಸವಣ್ಣನವರಿಗೆ ಬೆನ್ನೆಲುಬು ಬಂದಂತಾಯಿತು. ಒಂದು ಕಡೆಯಲ್ಲಿ ಬಸವಣ್ಣನವರ ಹೊಸಭಾವನೆಗಳನ್ನು ಪ್ರತಿಭಟಿಸುತ್ತಿದ್ದ ಪರಂಪರಾಪ್ರಿಯರಾದ ವಿರೋಧಶಕ್ತಿಗಳೂ, ಇನ್ನೊಂದು ಕಡೆಯಲ್ಲಿ ಸ್ವಜನರಂತೆ ವೇಷವನ್ನು ಧರಿಸಿದ್ದ ಕೇವಲ ಆಡಂಬರ ಜೀವಿಗಳಿಗೂ ಏಟು ಬಿದ್ದಂತಾಯಿತು. *"ಲಾಂಛನಕ್ಕೆ ಶರಣೆಂಬೆ ಅವರಂತ ರಂಗವ ನೀನೇ ಬಲ್ಲೆ"* ಎಂದು ಹೇಳಿ ಬಸವಣ್ಣನವರು ಜಂಗಮವೇಷಧಾರಿಗಳನ್ನೆಲ್ಲಾ ಸಂಗಮನಾಥನೆಂದೇ ಕಾಣುತ್ತಿದ್ದರು. ಆದರೆ ಅಲ್ಲಮಪ್ರಭು : *"ಲಾಂಛನಧಾರಿ ವೇಷವಧರಿಸಿ, ಆಸೆಯಿಂದ ಘಾಸಿಯಾಗಲೇಕಯ್ಯ? ಆನೆಯ ಚೋಹವ ತೊಟ್ಟು ನಾಯಾಗಿ ಬೋಗಳುವವರನೇನೆಂಬೆ ಗುಹೇಶ್ವರಾ"* ಎಂದು ನಿಷ್ಠುರವಾಗಿ ಖಂಡಿಸುತ್ತಾನೆ.

ಇದು ಬಸವಣ್ಣನವರ ಮಹಾಮನೆಯಲ್ಲಿದ್ದ ಜಂಗಮರಲ್ಲಿ ಒಂದು ಎಚ್ಚರಿಕೆಯನ್ನು ತಂದಿತು. ಜನರನ್ನು ಮೆಚ್ಚಿಸುವುದಕ್ಕಾಗಿ ಅವರು ಕೈಕೊಂಡ ಬಾಹ್ಯ ಆಡಂಬರ ಆಚಾರಗಳನ್ನು ಆತ ಒಪ್ಪಲಿಲ್ಲ. ಕೇವಲ ಸಂಪ್ರದಾಯದ ಕರ್ಮಗಳಲ್ಲಿ ಮಗ್ನರಾಗುವುದನ್ನು ಕೂಡಾ ಆತ ಖಂಡಿಸುತ್ತಾನೆ. ಅದು ತಿರುಳನ್ನು ಬಿಟ್ಟು ಸಿಪ್ಪೆಯನ್ನು ಹಿಡಿದಂತೆ. ಲಿಂಗವನ್ನು ಧರಿಸಿದ ಮಾತ್ರಕ್ಕೆ ಮುಕ್ತಿ ಬರುತ್ತದೆಂದರೆ ಅವನು ನಗುತ್ತಾನೆ.





*ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದೊಡೇನು?*
*ಹಸಿವು ಹೋಹುದೆ !*
*ಅಂಗದ ಮೇಲೆ ಲಿಂಗ ಸ್ವಾಯತವಾದರೇನು;*
*ಇಟ್ಟಕಲ್ಲು ಮೆಳೆಯಮೇಲೆ ಸಿಕ್ಕಿದಡೆ*
*ಆ ಕಲ್ಲು ಲಿಂಗವೇ? ಆ ಮೆಳೆ ಭಕ್ತನೇ?*
*ಇಟ್ಟಾತ ಗುರುವೇ?*
*ಇಂತಪ್ಪವರ ಕಂಡಡೆ ನಾನು ನಾಚುವೆನಯ್ಯ*
*ಗುಹೇಶ್ವರಾ*

ಹೊರಗಡೆ ಧರಿಸುವ ಕುರುಹು ಅಂತರಂಗದ ವಿಕಾಸಕ್ಕೆ ಕಾರಣವಾದರೆ ಆಗ ಅದಕ್ಕೆ ಬೆಲೆ. ಇಲ್ಲವಾದರೆ ಹಸಿವಾದವನಿಗೆ ಹೊಟ್ಟೆಯಮೇಲೆ ಅನ್ನವನ್ನು ಕಟ್ಟಿದಂತಾಗುತ್ತದೆ. ಬಿದಿರಿಗೆ ಕಲ್ಲನ್ನು ಕಟ್ಟಿದಂತೆ ವ್ಯರ್ಥವಾಗುತ್ತದೆ ಎನ್ನುತ್ತಾನೆ. ಹಾಗೆಯೇ :

*ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ ಕಂಡು*
*ನಾಚಿದೆನಯ್ಯ;*
*ಒಳಗೊಂದು ಅನಿಮಿಷ ಲಿಂಗವ ಕಂಡು*
*ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದರೆ*
*ನಾಚಿಕೆ ಮಾತು ನಿಸ್ಸಂದೇಹಿಯಾದೆನು ಗುಹೇಶ್ವರಾ*

ಗಿಡದ ಹೂವನ್ನು ಕೊಯ್ದು ಲಿಂಗಕ್ಕೆ ಏರಿಸಿದರೆ ಅದರ ಫಲ ಹೂವನ್ನು ಕೊಟ್ಟ ಗಿಡಕ್ಕೆ. ಲಿಂಗಕ್ಕೆ ನಿಜವಾದ ಪೂಜೆಯಲ್ಲಿ ಈ ಪುಷ್ಪಗಳ ಜೊತೆಗೆ ಮನೋಪುಷ್ಪ ಸಮರ್ಪಿತವಾಗಬೇಕು. ಆಗ ಭಕ್ತನಿಗೆ *'ಇದು ಬೇಕು' 'ಇದು ಬೇಡ'* ಎಂಬ ಭೇದವುಳಿಯುವುದಿಲ್ಲ. *"ಕಾಯದಲ್ಲಿ ಕಾಯ ಸವೆದು, ಪ್ರಾಣದಲ್ಲಿ ಪ್ರಾಣ ಸವೆದು ನಿಶ್ಚಿಂತವಾದ ಬಳಿಕ, ಹಸಿವು ತೃಷೆಗಳೆಂಬವು ಅಳಿದು ಹೋದವು ಕೇಳಾ. ಉಂಡೇವೆಂಬ ಬಯಕೆಯೂ ಇಲ್ಲ. ಒಲ್ಲೆವೆಂಬ ವೈರಾಗ್ಯವೂ ಇಲ್ಲ. ಇದು ಸ್ವಭಾವ ವೃತ್ತಿಯೊಳಗಡಗಿತ್ತು"* ಎನ್ನುತ್ತಾನೆ ಅಲ್ಲಮ.

ಹೀಗೆ ಅಲ್ಲಮನ ಮಾತುಗಳಲ್ಲಿ ಹೆಜ್ಜೆ ಹೆಜ್ಜೆಗೂ ಸ್ವತಂತ್ರ ಮನೋಧರ್ಮವನ್ನೂ ಸಂಪ್ರದಾಯಕ್ಕೆ ಅತೀತವಾದ ವಿಶ್ವವ್ಯಾಪಕ ಭಾವನೆಗಳನ್ನೂ ಕಾಣುತ್ತೇವೆ. ಈ ದೃಷ್ಟಿಯಿಂದ ಎಲ್ಲ ಜನಾಂಗಕ್ಕೂ, ಎಲ್ಲ ಕಾಲಕ್ಕೂ ಪ್ರಿಯವಾಗಿ ಮಾರ್ಗದರ್ಶಕವಾಗಬಲ್ಲ ಯೋಗ್ಯತೆ ಈ ವಚನಗಳಲ್ಲಿದೆ. ಈತ ಯಾವುದನ್ನೂ ಮೂಢನಂಬಿಕೆಯಿಂದ ನಂಬುವವನಲ್ಲ. ಧರ್ಮಮಾರ್ಗದಲ್ಲಿ ಸಾಧಕನು ಶಕ್ತಿಯನ್ನು ಪಡೆಯಬೇಕಾದರೆ, ಕುರುಡುನಂಬಿಕೆಯಿಂದಾಗಲೀ ಮಾನ್ಯತೆಯಿತ್ತರೂ, ಅದನ್ನೂ ಒಳಗೊಂಡ ಶ್ರದ್ಧೆ ಮತ್ತು ಅರಿತ ತತ್ವಗಳ ಆಚರಣೆಗಳು ಅತ್ಯಗತ್ಯವಾದುವು ಎನ್ನುತ್ತಾನೆ. ಈ ಅರ್ಥದಲ್ಲಿಯೇ ಆತ ವೇದಪುರಾಣಾದಿಗಳನ್ನು ಕುರಿತು ಹೀಗೆ ಹೇಳಿರುವುದು.

*ವೇದ ವೇಧಿಸಲರಿಯದೆ ಕೆಟ್ಟವು,*
*ಶಾಸ್ತ್ರ ಸಾಧಿಸಲರಿಯದೆ ಕೆಟ್ಟುವು,*
*ಪುರಾಣ ಪೂರೈಸಲರಿಯದೆ ಕೆಟ್ಟುವು,*
*ಹಿರಿಯರು ತಮ್ಮ ತಾವರಿಯದೆ ಕೆಟ್ಟರು,*
*ತಮ್ಮ ಬುದ್ಧಿ ತಮ್ಮನ್ನೇ ತಿಂದಿತ್ತು,*
*ನಿಮ್ಮನ್ನೆತ್ತ, ಬಲ್ಲರು ಗುಹೇಶ್ವರಾ*

*ವೇದವೆಂಬುದು ಓದಿನ ಮಾತು,*
*ಶಾಸ್ತ್ರವೆಂಬುದು ಸಂತೆಯ ಸುದ್ದಿ,*
*ಪುರಾಣವೆಂಬುದು ಪುಂಡರ ಗೋಷ್ಠಿ,*
*ತರ್ಕವೆಂಬುದು ತಗರ ಹೋರಟೆ,*
*ಭಕ್ತಿಯೆಂಬುದು ತೋಱಿಂಬ ಲಾಭ,*
*ಗುಹೇಶ್ವರನೆಂಬುದು ಮೀರಿದ ಘನವು*

ಇದರಿಂದ ಅಲ್ಲಮ ವೇದಶಾಸ್ತ್ರ ನಿಂದಕನೆಂದರ್ಥವಲ್ಲ ಅವು ಕೇವಲ ಬುದ್ಧಿ ಚಮತ್ಕಾರವಾದಾಗ ವ್ಯರ್ಥವಾಗುತ್ತವೆ. ನಿಜವಾದ ಜ್ಞಾನವನ್ನು ಅವು ತೋರಿಸಲಾರವು. ಸತ್ಯ ಇವುಗಳ ಆಚೆಗಿದೆ ಎಂದು ಸೂಚಿಸುತ್ತಾನೆ.

ಹೀಗೆ ಅಲ್ಲಮಪ್ರಭು ಅನುಭಾವ ಒಂದಕ್ಕೇ ಮಹತ್ವವನ್ನು ಕೊಟ್ಟವನು. ಆತ ತಾನು ಸ್ವತಃ ಅನುಭಾವ ಮಾರ್ಗದಲ್ಲಿ ನಡೆದು ಏರಿದ ನಿಲವೇನೆಂಬುದನ್ನು ಹಿಂದೆ ಆತನ ಅನುಭಾವದ ನುಡಿಗಳಲ್ಲಿ ನೋಡಿದ್ದೇವೆ. ಆ ಮಾರ್ಗದಲ್ಲಿ ಮಾನವತೆಯು ಪಡೆಯಬಹುದಾದ ಮಹತ್ತರವಾದ ಮಟ್ಟವನ್ನು ಸಹಜ ಸ್ಥಿತಿಯಾಗಿ ಅಳವಡಿಸಿಕೊಂಡವನು. ಆ ನಿಲುವಿನತ್ತ ಕಲ್ಯಾಣದ ಶರಣರೂ ಮುನ್ನಡೆಸಲು ಮಾರ್ಗದರ್ಶಕನಾಗಿ ಪರಿಣಮಿಸಿದನು. ಅನುಭವ ಮಂಟಪದ ಅಧ್ಯಕ್ಷಪೀಠದಲ್ಲಿ ಕುಳಿತು ಸಾಧಕರ ಸಂದೇಹಗಳ ಮೇಲೆ ಅನುಭಾವದ ಬೆಳಕನ್ನು ಬೀರಬಲ್ಲ ಸ್ವಯಂ ಜ್ಯೋತಿಯಾಗಿ ಪರಿಣಮಿಸಿದನು ಪ್ರಭುದೇವನು.

ನಾನಾ ಕಾಯಕಗಳಲ್ಲಿ ತೊಡಗಿದ್ದ ಶರಣರು ಆ ಕಾಯಕಗಳಲ್ಲಿದ್ದುಕೊಂಡೇ ಅತ್ಯುದಾತ್ತವಾದುದನ್ನು ಸಾಧಿಸಬಹುದೆಂಬ ಬಸವಣ್ಣನವರ ಆದರ್ಶಕ್ಕೆ ಅಲ್ಲಮಪ್ರಭು ಆಧ್ಯಾತ್ಮಿಕ ಮಾರ್ಗವನ್ನು ರೂಢಿಸಿ ತೋರಿಸಿದನು. ಶರಣರು ಆ ಮಾರ್ಗದಲ್ಲಿ ನಡೆಯುವಂತೆ ಬೋಧಿಸಿದ. ನಿರ್ದಾಕ್ಷಿಣ್ಯವಾಗಿ ಅವರನ್ನು ಒರೆಗೆ ಹಚ್ಚಿನೋಡಿ ಅವರ ಮಿತಿ ಮತ್ತು ಶಕ್ತಿಗಳ

ಅರಿವನ್ನು ಅವರಿಗೆ ಉಂಟುಮಾಡಿಕೊಟ್ಟ. ಇದರಿಂದ ಅವರು ತಮ್ಮ ಸಾಧನೆಯಲ್ಲಿ ನಡೆಯುವುದಕ್ಕೆ ಸಹಾಯಕವಾಯಿತು. ಆಧ್ಯಾತ್ಮಿಕ ಶಿಲ್ಪಿಗಳ ಅದ್ಭುತ ರೂವಾರಿಯಾದ ಅಲ್ಲಮನ ಆ ರೋಮಾಂಚಕರವಾದ ಕಥೆಯನ್ನು ಹಿಡಿದಿಡಲು *"ಶೂನ್ಯ ಸಂಪಾದನೆ"* ಪ್ರಯತ್ನಪಟ್ಟಿದೆ. ಆ ದೃಷ್ಟಿಯಿಂದ ಅದು ಕನ್ನಡದಲ್ಲಿ ಅದ್ವಿತೀಯ ಗ್ರಂಥವಾಗಿ ಪರಿಣಮಿಸಿದೆ.

ಅಲ್ಲಮಪ್ರಭು ಅನುಭವಮಂಟಪದ ಗೋಷ್ಠಿಗಳಲ್ಲಿ ಪ್ರಮುಖ ಸ್ಥಾನವನ್ನು ವಹಿಸಿ ಅದನ್ನೊಂದು ವ್ಯವಸ್ಥೆಗೆ ತಂದ ಮೇಲೆ ಸಹಜ ಜಂಗಮವಾದ ಆತ ಮತ್ತೆ ಸಂಚಾರವನ್ನು ಕೈಕೊಳ್ಳಲು ಬಯಸುತ್ತಾನೆ. ನಡೆದರೆ ನಿರ್ಗಮನಿ, ಸುಳಿದೊಡೆ ಗತಿವಿರಹಿತನಾದ ಪ್ರಭುದೇವ ಕಲ್ಯಾಣದಿಂದ ಹೊರಟು ಕೆಲವು ವರ್ಷಗಳ ಕಾಲ ಇಡೀ ಭಾರತದ ಸಂಚಾರವನ್ನು ಕೈಕೊಳ್ಳುತ್ತಾನೆಂದು ಹೇಳಿ ಆಯಾ ಸ್ಥಳಗಳನ್ನೆಲ್ಲಾ ಹೆಸರಿಸುತ್ತಾರೆ ಸಿದ್ಧವೀರಣ್ಣೊಡೆಯರು.

ಹೀಗೆ ದೀರ್ಘಕಾಲ ಸಂಚಾರವನ್ನು ಕೈಕೊಂಡನಂತರ ಮತ್ತೆ ಕಲ್ಯಾಣದತ್ತ ಅಭಿಮುಖನಾಗಿ ಬರುತ್ತಾನೆ. ಇತ್ತ ಬಸವೇಶ್ವರ ಶೂನ್ಯಸಿಂಹಾಸನವನ್ನು ರಚಿಸಿ ಪ್ರಭುದೇವನ ಬರವನ್ನು ಹಾರೈಸುತ್ತಿರಲು, ಆತನ ಬರುವಿಕೆಯ ಸೂಚನೆ ಯಾಗುತ್ತದೆ. ಆರೆಮರುಳನ ವೇಷದಿಂದ ಬಂದ ಆತನನ್ನು ಕ್ಷಣಮಾತ್ರದಲ್ಲಿ ಗುರುತಿಸಿ, ಸಂಭ್ರಮದಿಂದ ಕರೆದುತಂದು ಶೂನ್ಯಸಿಂಹಾರಸನದ ಮೇಲೆ ಕುಳ್ಳಿರಿಸುತ್ತಾನೆ. ಆ ಸಂದರ್ಭದಲ್ಲಿ ಬರುವ ಆರೋಗಣೆಯ ಪ್ರಸಂಗವನ್ನು ಅರ್ಥವತ್ತಾಗಿ ವರ್ಣಿಸಿದೆ ಶೂನ್ಯಸಂಪಾದನೆ. *"ಅಮೃತದ ಪುತ್ಥಳಿಯ, ಹಾಲು ಕುಡಿಯ ಕರೆದಡೆ ಗುಹೇಶ್ವರಲಿಂಗಕ್ಕೆ ಊಟವೆಂಬುದಿಲ್ಲ ನೋಡಾ ಸಂಗನ ಬಸವಣ್ಣಾ." "ಉಂಡೇನೆಂಬ ಬಯಕೆಯೂ ಇಲ್ಲ, ಒಲ್ಲನೆಂಬ ವೈರಾಗ್ಯವೂ ಇಲ್ಲ. ಇದು ಸ್ವಭಾವ ತೃಪ್ತಿಯೊಳಡಗಿತ್ತು"* – ಈ ಮುಂತಾದ ಮಾತುಗಳು ಅಲ್ಲಮನ ಮನೋಧರ್ಮವನ್ನು ಸುಂದರವಾಗಿ ಸೂಚಿಸುತ್ತವೆ. ಬೇಕು ಬೇಡಗಳ ಹಂಗನ್ನು ಹರಿದವನು ಅಲ್ಲಮಪ್ರಭು. ತನಗಾಗಿ ಅಲ್ಲದಿದ್ದರೂ ಬಸವಣ್ಣನಿಗಾಗಿ ಆರೋಗಣೆಗೆ ಒಪ್ಪಿಕೊಳ್ಳುತ್ತಾನೆ.

ಆಗ ಬೇಕೆಂತಲೇ ಪ್ರಭು, ಲೀಲಾವಿನೋದವನ್ನು ಕೈಕೊಂಡು, ತನಗೆ ಅರ್ಪಿಸಿದ ಪ್ರಸಾದವನ್ನೆಲ್ಲಾ ಮುಗಿಸುತ್ತಾ, ಹೆಡಿಗೆ ಹೆಡಿಗೆಗಳಲ್ಲಿ ತುಂಬಿದ ಭಕ್ಷ್ಯ ಭೋಜ್ಯಗಳೆಲ್ಲಾ ಮುಗಿದರೂ ಇನ್ನೂ ಬೇಕು ಬೇಕು ಎನ್ನತೊಡಗುತ್ತಾನೆ. *"ದೇವರ ಹಸಿವು ಹೊಸದಲಾ"* ಎಂದು ಬಸವಣ್ಣನವರು ಆಶ್ಚರ್ಯಗೊಳ್ಳುತ್ತಾರೆ. ಅವನ ಹಸಿವನ್ನು ತೃಪ್ತಿಪಡಿಸುವ ಬಗೆ ಕಾಣದಂತಾಗುತ್ತದೆ. ಆದ ಚೆನ್ನಬಸವಣ್ಣ ಹೇಳುವ ಮಾತು ಅರ್ಥವತ್ತಾಗಿದೆ : *"ಕೂಡಲ ಚೆನ್ನಸಂಗಮ ದೇವರ ತೃಪ್ತಿಯ ತೆರವನೊಲಿದರೆ, ನೀವು ಬೋನ ನಾನು ಪದಾರ್ಥ. ಇದರಿಂದ ಮೇಲೇನೂ ಘನವಿಲ್ಲ ಕಾಣಾ ಸಂಗನ ಬಸವಣ್ಣ"*. ಅಂದರೆ ಈ ಹೊರಗಿನ ಆಹಾರಾದಿಗಳಿಂದ ಪ್ರಭುವನ್ನು ತೃಪ್ತಿಪಡಿಸುವುದು ಸಾಧ್ಯವಿಲ್ಲ. ನಾವೇ ಆತನಿಗೆ ಅರ್ಪಿತವಾಗಬೇಕು ಎಂಬ ಪ್ರಸಾದಿಸ್ಥಲದ ಸಂಪೂರ್ಣ ಶರಣಾಗತಿ ಇಲ್ಲಿ ಕಾಣುತ್ತದೆ. ಅದನ್ನು ತಿಳಿದ ಬಸವಣ್ಣ ತನ್ನನ್ನೇ ಸಂಪೂರ್ಣವಾಗಿ ಪ್ರಭುವಿಗೆ ಅರ್ಪಿಸಿಕೊಳ್ಳುತ್ತಾನೆ. ಆಗ ಪ್ರಭುವಿನ ಹಸಿವು ಹಿಂಗುತ್ತದೆ. ತಾಯಿ ತೃಪ್ತಿಪಟ್ಟರೆ ಹೊಟ್ಟೆಯೊಳಗಿನ ಶಿಶುವೂ ತೃಪ್ತಿಪಡುವಂತೆ ಜಂಗಮರೆಲ್ಲರೂ ಸಂತೃಪ್ತರಾಗುತ್ತಾರೆ. ಈ ಇಡೀ ಸನ್ನಿವೇಶವೂ ಆಧ್ಯಾತ್ಮಿಕ ಅರ್ಥಕ್ಕೆ ಸಾಂಕೇತಿಕವಾಗಿರುವಂತೆ ತೋರುತ್ತದೆ.

ಅಂತೂ ಅಲ್ಲಮಪ್ರಭು ಹಿಂದಿರುಗಿ ಬಂದು ಶೂನ್ಯ ಸಿಂಹಾಸನವನ್ನೇರಿ ಅನುಭವ ಮಂಟಪದಲ್ಲಿ ಮತ್ತೆ ಕೇಂದ್ರಸ್ಥಾನ ವನ್ನು ವಹಿಸಿಕೊಂಡನು. ಬಸವಣ್ಣನ ಕಾರ್ಯಕ್ಷೇತ್ರ ವ್ಯಾಪಕ ವಾಗಿ ಬೆಳೆಯಿತು. *"ಎತ್ತೆತ್ತ ನೋಡಿದರೆ ಬಸವಣ್ಣನೆಂಬ ಬಳ್ಳಿ. ಆ ಬಳ್ಳಿಯ ಹಿಡಿದೆತ್ತಿದರೆ ಲಿಂಗವೆಂಬ ಗೊಂಚಲು. ಆ ಲಿಂಗದ ಗೊಂಚಲ ಹಿಡಿದೆತ್ತಿದರೆ ಭಕ್ತಿರಸಮಯವಾಯಿತ್ತಯ್ಯಾ !"* – ಎಂದು ಪ್ರಭುದೇವನೇ ಆತನ ವ್ಯಕ್ತಿತ್ವದ ವ್ಯಾಪಕತೆಯನ್ನು ಸೂಚಿಸಿದ್ದಾನೆ. ಭಕ್ತಿಯಲ್ಲಿ ಮಾತ್ರವೇ ಅಲ್ಲದೆ, ಅಂದಿನ ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿಯೂ ಅವನ ಪ್ರಭಾವ ವ್ಯಾಪಿಸಿತು. ಮಾನವ ಜಾತಿ ಒಂದೇ ಎಂದು ಆತ ಸಾಧಿಸಿದ ಅತ್ಯುನ್ನತವಾದ ಸಮಾನತೆ ಅಂದಿನ ವಾತಾವರಣ ದಲ್ಲಿ ಬಹಳ ಕ್ರಾಂತಿಕಾರಕವಾಗಿ ಪರಿಣಮಿಸಿತು. ಕೊನೆಗೆ ಅಸ್ಪೃಶ್ಯ ಹರಳಯ್ಯ, ಬ್ರಾಹ್ಮಣ ಮಧುವರಸ ಇವರಲ್ಲಿ ಬೆಳೆದ ಬಾಂಧವ್ಯವನ್ನಂತೂ ಆ ಯುಗ ಅರಗಿಸಿಕೊಳ್ಳಲಾರದೇ ಹೋಯಿತು. ಅದೇ ಕಾರಣವಾಗಿ ಕಲ್ಯಾಣದಲ್ಲಿ ದೊಡ್ಡ ಕ್ರಾಂತಿಯಾಯಿತು. ಶರಣರೆಲ್ಲ ಚದುರಬೇಕಾಯಿತು. ಶೂನ್ಯ ಸಂಪಾದನೆಯಲ್ಲಿ *'ಶರಣರ ಅವಸಾನ ಪರಾಮರಿಕೆ'* – ಎಂಬ ಭಾಗದಲ್ಲಿ ಆಗ ಅಲ್ಲಮಪ್ರಭು ಶರಣರೆಲ್ಲರಿಗೂ ನಿರ್ದೇಶನ ವನ್ನು ಕೊಟ್ಟ ಮಾತುಗಳು ಬರುತ್ತವೆ.

ಹೀಗೆ ಶರಣರೆಲ್ಲರಿಗೂ ಅವರವರ ಗುರಿಯನ್ನು ಅಲ್ಲಮಪ್ರಭು ತೋರಿಸಿದ ಮೇಲೆ ಕಲ್ಯಾಣದಲ್ಲಿ ತನ್ನ ಕಾರ್ಯ ಮುಗಿಯಿತೆಂದು ಆತನಿಗೆ ತೋರಿತು. ಹಿಂದೆ ಹೇಳಿದಂತೆ ಶ್ರೀಶೈಲದತ್ತ ನಡೆದು ಅಲ್ಲಿಯ ಕದಳಿಯ ವನದಲ್ಲಿ ಶಿವನ ಸಾಮರಸ್ಯದ ಕೊನೆಯ ನಿಲುವಿನಲ್ಲಿ ವಿಲೀನವಾಗಿ ವಿಶ್ವವನ್ನೇ ವ್ಯಾಪಿಸಿದನು. ಮಹಾಜ್ಯೋತಿಯಲ್ಲಿ ಜ್ಯೋತಿಯಡಗಿತು. ★

*(ಮುಂದುವರಿಯುತ್ತದೆ)*





# ಪೊಲೀಸರು ಎಂತಹ ದೂರುಗಳನ್ನು ಕೈಗೆತ್ತಿಕೊಳ್ಳಬಹುದು

– ಡಾ. ಡಿ.ವಿ. ಗುರುಪ್ರಸಾದ್, ಐ.ಪಿ.ಎಸ್.,
ನಿರ್ದೇಶಕರು
ವಾರ್ತಾ ಮತ್ತು ಪ್ರಚಾರ ಇಲಾಖೆ
ನಂ. ೫, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು – ೧

*ಪೊಲೀಸರು ಮತ್ತು ನಾಗರಿಕರ ನಡುವಿನ ಬಾಂಧವ್ಯ ಅಷ್ಟೇನು ಸುಮಧುರವಾಗಿಲ್ಲ. ಪೊಲೀಸರೆಂದರೆ ಗ್ರಾಮೀಣರಿರಲಿ, ನಗರದವರೂ ದೂರ ಸರಿಯುತ್ತಾರೆ. ಇದಕ್ಕೆ ಕಾರಣ ಸಾರ್ವಜನಿಕರ ಮನಸ್ಸಿನಲ್ಲಿ ಪೊಲೀಸರ ಬಗ್ಗೆ ಇರುವ ಅನುಮಾನಗಳು, ತಪ್ಪು ಅಭಿಪ್ರಾಯಗಳು ಹಾಗೂ ಕಾನೂನಿನ ಬಗ್ಗೆ ಇರುವ ಹಲವಾರು ಸಂದೇಹಗಳು. ಜನರ ಮನಸ್ಸಿನಲ್ಲಿ ಬೇರೂರಿರುವ ಈ ಸಂದೇಹಗಳು ನಿವಾರಣೆಯಾದಾಗ ಪೊಲೀಸರು ಮತ್ತು ನಾಗರಿಕರ ನಡುವೆ ಒಳ್ಳೆಯ ಭಾವನೆ ಮೂಡಿ ನಿರ್ಮಲ ವಾತಾವರಣ ಉಂಟಾಗುತ್ತದೆ. ಈ ದೃಷ್ಟಿಯಿಂದ ಸಿದ್ಧಗಂಗಾ ಮಾಸಪತ್ರಿಕೆಯಲ್ಲಿ ಪ್ರಸ್ತುತ ಸಂಚಿಕೆಯಿಂದ 'ಕಾನೂನು' ಎಂಬ ಹೊಸ ಅಂಕಣವನ್ನು ಪ್ರಾರಂಭಿಸುತ್ತಿದ್ದೇವೆ ಎಂದು ತಿಳಿಸಲು ಸಂತೋಷವಾಗುತ್ತದೆ.*

*ರಾಜ್ಯದ ಹಿರಿಯ ಪೊಲೀಸ್ ವರಿಷ್ಠಾಧಿಕಾರಿಗಳು, ಪ್ರಸ್ತುತ ವಾರ್ತಾ ಮತ್ತು ಪ್ರಚಾರ ಇಲಾಖೆಯ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿರುವ ಡಾ || ಡಿ.ವಿ. ಗುರುಪ್ರಸಾದ್, ಐ.ಪಿ.ಎಸ್., ಅವರು ಕನ್ನಡದಲ್ಲಿ ಸರಳವಾಗಿ ಸಮರ್ಥವಾಗಿ ಜನರ ಹೃದಯವನ್ನು ತಟ್ಟುವಂತೆ, ಮುಟ್ಟುವಂತೆ ಬರೆಯುವ ಕಲೆಯನ್ನು ಕರಗತಮಾಡಿಕೊಂಡಿದ್ದಾರೆ. ಅವರು ಈಗಾಗಲೇ "ಜನರೊಂದಿಗೆ ಪೊಲೀಸರು" ಎಂಬ ಮೌಲಿಕ ಕೃತಿಯನ್ನು ಬರೆದಿದ್ದು ಗೀತಾಂಜಲಿ ಪ್ರಕಾಶನದವರು ಬಹು ಆಕರ್ಷಕವಾಗಿ ಹೊರತಂದಿದ್ದಾರೆ. ಈ ಕೃತಿಯಲ್ಲಿನ ಕೆಲವು ಭಾಗಗಳನ್ನು ಧಾರವಾಹಿಯಾಗಿ ಪ್ರಕಟಿಸಲಾಗುತ್ತಿದೆ. ನಮ್ಮ ಪತ್ರಿಕೆಯ ಓದುಗರು, ಚಂದಾದಾರರು ಇದರ ಸದುಪಯೋಗವನ್ನು ಪಡೆದುಕೊಳ್ಳುತ್ತಾರೆಂಬ ಆಶಯ ನಮ್ಮದು.*

*– ಸಂ.*

"ಸಂಕಟ ಬಂದಾಗ ವೆಂಕಟರಮಣಾ" ಅಂತಾರೆ. ಆದ್ರೆ ಈಗ ಸಂಕಟ ಬಂದರೆ ನಾವೆಲ್ಲ ಮೊದಲು ಜ್ಞಾಪಿಸಿಕೊಳ್ಳೋದು ಪೊಲೀಸರನ್ನೇ. ಯಾವ್ದೇ ತೊಂದ್ರೆ ಬಂದ್ರೂ 'ಹೊಯ್ಸಳಾಗೆ ಫೋನ್ ಮಾಡು'. 'ಕಂಟ್ರೋಲ್ ರೂಂಗೆ ತಿಳಿಸು' ಅಥವಾ 'ಪೊಲೀಸರಿಗೆ ಹೇಳೋಣವಾ' ಎನ್ನುವುದೇ ಜನರ ಮೊದಲ ಪ್ರತಿಕ್ರಿಯೆ.

ಪೊಲೀಸರಿಗೆ ಸಂಕಟದಲ್ಲಿರುವ ಹಲವು ಹತ್ತು ಜನರಿಂದ ಪ್ರತಿದಿನವೂ ದೂರು ಬರುತ್ತದೆ. "ನಂ ಮನೆ ಕಳ್ತನ ಆಯ್ತು", "ನಾನು ವಾಕಿಂಗ್‌ಗೆ ಹೋಗುವಾಗ ಇಬ್ಬರು ನನ್ನ ಸರವನ್ನು ಕಿತ್ತುಕೊಂಡು ಓಡಿದರು", "ಪಕ್ಕದ್ಮನೇಲಿ ಜೋರಾಗಿ ಸ್ಟೀರಿಯೋ ಹಾಕಿದ್ದಾರೆ", "ನಮ್ಮ ಹುಡುಗ ಕಿಡ್ನಾಪ್ ಆದ" ಇತ್ಯಾದಿಯಿಂದ ಹಿಡಿದು "ನನ್ನ ನಾಯಿ ಕಳೆದುಹೋಯ್ತು", "ನಮ್ಮ ಬಾಡಿಗೆದಾರ ಈ ತಿಂಗಳ ಬಾಡಿಗೆ ಕೊಟ್ಟಿಲ್ಲ", "ನನ್ನ ಗೆಳೆಯ ಕೊಟ್ಟ ಸಾಲ ವಾಪಸ್ ಕೊಡು ಅಂತ ಕೇಳಿದ್ರೆ ದಬಾಯಿಸುತ್ತಾನೆ" ಇತ್ಯಾದಿ.

ಬಂದಂತಹ ಎಲ್ಲ ದೂರುಗಳ ಬಗ್ಗೆ ಕ್ರಮ ತೆಗೆದುಕೊಳ್ಳಲು ಪೊಲೀಸರಿಗೆ ಅಧಿಕಾರ ಇಲ್ಲ. ಏಕೆಂದರೆ ಕೆಲವು ದೂರುಗಳು ಪೊಲೀಸರ ವ್ಯಾಪ್ತಿಯಲ್ಲಿ ಬರುವುದಿಲ್ಲ. ಎಷ್ಟೋ ಸಲ ನಾವು ಪೊಲೀಸರಿಗೆ ದೂರು ನೀಡಿದಾಗ "ಇದು ಸಿವಿಲ್ ಕೇಸು", "ಇದು ನಾನ್ ಕಾಗ್ನಿಸಬಲ್ ಕೇಸು" ಎಂದು ಹೇಳಿ ಪೊಲೀಸರು ಉತ್ತರ ಕೊಟ್ಟು ನಮ್ಮನ್ನು ಸಾಗಹಾಕ್ತಾರೆ. ಆಗ ನಾವು "ಎಂತಹ ಪೊಲೀಸರಪ್ಪಾ ಇವರು. ದೂರು ಕೊಟ್ಟರೆ ಏನೂ Action ತೊಗೊಳ್ಳಲಿಲ್ಲವಲ್ಲಾ" ಎಂದು ಪೊಲೀಸರಿಗೆ ಬೈಕೊಂಡು ಅವರಿಗೆ ಶಾಪವನ್ನೂ ಹಾಕ್ತೀವಿ.

ಆದ್ರೆ ಪೊಲೀಸರಿಗೆ ಯಾವ ವಿಷಯವನ್ನು ತನಿಖೆ ಮಾಡಬೇಕು, ಯಾವ ದೂರಿನ ಮೇಲೆ ಕ್ರಮ ತಗೋಬೇಕು, ಅಂತ ಇತಿ ಮಿತಿ ಇದೆ. ಠಾಣೆಗೆ ಬಂದ ಎಲ್ಲ ದೂರುಗಳ ಬಗ್ಗೆಯೂ ಪೊಲೀಸರು ಕ್ರಮ ತೆಗೆದುಕೊಳ್ಳಬೇಕಾದಲ್ಲಿ ಅವರು ಈಗಿರುವ ಸಂಖ್ಯೆ ಇನ್ನು ನೂರು ಪಟ್ಟಾಗಬೇಕು.

ಪೊಲೀಸರು ಮೂರು ತರಹದ ಕಾಯ್ದೆಗಳನ್ವಯ ದೂರುಗಳನ್ನು ಸ್ವೀಕರಿಸುತ್ತಾರೆ. ಅವುಗಳೆಂದರೆ:

೧. **ಐ.ಪಿ.ಸಿ. (ಭಾರತೀಯ ದಂಡ ಸಹಿತೆ)** – ಸರಿಸುಮಾರು ಎಲ್ಲ ರೀತಿಯ ಅಪರಾಧಗಳನ್ನೂ ಈ ಸಂಹಿತೆ ಒಳಗೊಂಡಿದೆ.

೨. **ವಿಶೇಷ ಕಾನೂನುಗಳು** – ಅಂದರೆ ಆಯುಧಗಳ ಬಗೆಗಿನ Arms Act, ಲಂಚ ನಿರೋಧ ಕಾಯ್ದೆ, ವೇಶ್ಯಾವೃತ್ತಿ ನಿರೋಧ ಕಾಯ್ದೆ, ನಾಗರಿಕ ಹಕ್ಕು ರಕ್ಷಣೆ ಕಾಯ್ದೆ ಇತ್ಯಾದಿ ....

೩. **ಸ್ಥಳೀಯ ಕಾನೂನುಗಳು** – ಅಂದರೆ ಕರ್ನಾಟಕ ಪೊಲೀಸ್ ಕಾಯ್ದೆ, ಕರ್ನಾಟಕ ಅರಣ್ಯ ಕಾಯ್ದೆ, ಕರ್ನಾಟಕ ನಾಗರಿಕ ಸರಬರಾಜು ಕಾಯ್ದೆ ಇತ್ಯಾದಿಗಳು.

ಮೇಲೆ ತಿಳಿಸಿದ ಕಾಯ್ದೆಗಳ ಅನ್ವಯ ಒಬ್ಬ ವ್ಯಕ್ತಿ ಮಾಡಿದ ಕೃತ್ಯ ಅಪರಾಧವಾಗಿದೆ ಎಂದು ತಿಳಿದುಬಂದಲ್ಲಿ ಆಗ ಆ ಬಗ್ಗೆ ಪೊಲೀಸರು ಕೇಸು ದಾಖಲಿಸಬಹುದು. ಪೊಲೀಸ್ ಠಾಣೆಗೆ ಬಂದ ಹಲವು ದೂರುಗಳು ಕಾನೂನಿನ ರೀತ್ಯಾ ಅಪರಾಧವಾದರೂ ಪೊಲೀಸರು ಕೇಸುಗಳನ್ನು ದಾಖಲಿಸಲು ಬರುವುದಿಲ್ಲ ಏಕೆ ಅಂತೀರಾ?

ದೂರುಗಳಲ್ಲಿ ಎರಡು ವಿಧಗಳಿವೆ – ಒಂದು ಕಾಗ್ನಿಸಬಲ್ ಕೇಸು ಹಾಗೂ ಮತ್ತೊಂದು ನಾನ್ ಕಾಗ್ನಿಸಬಲ್ ಕೇಸು. ಕಾಗ್ನಿಸಬಲ್‌ಕೇಸು ಎಂದರೆ ಪೊಲೀಸರು ನ್ಯಾಯಾಲಯದ ಆಜ್ಞೆ ಇಲ್ಲದೆಯೇ, ತಂತಾನೆಯೇ ದೂರನ್ನು ದಾಖಲಿಸಿ ತನಿಖೆ ಕೈಕೊಳ್ಳುವಂತಹ ಪ್ರಕರಣಗಳು. ಇಂತಹ ಕೇಸುಗಳಿಗೆ ಉದಾಹರಣೆ ಎಂದರೆ ಕೊಲೆ, ದರೋಡೆ, ಮನೆ ಕಳ್ಳತನ, ಜಬರಿ ಕಳವು ಇತ್ಯಾದಿ. ಇಂತಹ ಕೇಸುಗಳ ಬಗ್ಗೆ ದೂರು ಬಂದ ಕೂಡಲೇ ಪೊಲೀಸ್ ಠಾಣೆಯಲ್ಲಿ ಕೇಸನ್ನು ದಾಖಲಿಸಿ ಕೂಡಲೇ ತನಿಖೆ ಕೈಗೊಳ್ಳಲಾಗುತ್ತದೆ.

ನಾನ್ ಕಾಗ್ನಿಸಬಲ್ ಕೇಸ್ ಎಂದರೆ ಪೊಲೀಸರು ನೇರವಾಗಿ ದೂರು ದಾಖಲಿಸಿ ತನಿಖೆ ಮಾಡಲಾರದಂತಹ ಕೇಸು. ಉದಾಹರಣೆ ನೀವು ದಾರಿಯಲ್ಲಿ ಹೋಗುತ್ತಿದ್ದಾಗ ಯಾವುದೋ ವ್ಯಕ್ತಿ ನಿಮ್ಮೊಡನೆ ಜಗಳ ತೆಗೆದು ನಿಮ್ಮ ಕಪಾಳಕ್ಕೆ ಬಾರಿಸುತ್ತಾನೆ. ಈ ಬಗ್ಗೆ ನೀವು ಪೊಲೀಸ್ ಠಾಣೆಗೆ ಹೋಗಿ ದೂರು ನೀಡಿದರೆ ''ಇದು ನಾನ್ ಕಾಗ್ನಿಸಬಲ್ ಕೇಸು-ಕೋರ್ಟಿಗೆ ಹೋಗಿ'' ಅಂತ ಹೇಳ್ತಾರೆ. ಇಂತಹ ಪ್ರಕರಣಗಳಲ್ಲಿ ನಾವು ಮೊದಲು ಕೋರ್ಟಿಗೆ ಹೋಗಿ ಈ ರೀತಿ ಘಟನೆ ನಡೆಯಿತು ಎಂದು ಅರ್ಜಿ ಕೊಟ್ಟರೆ, ಆ ಅರ್ಜಿಯನ್ನು ಆಲಿಸಿದ ನ್ಯಾಯಾಲಯ ಪೊಲೀಸರಿಗೆ ಪ್ರಕರಣ ದಾಖಲಿಸಿ ತನಿಖೆ ಮಾಡಲು ಆದೇಶಿಸುತ್ತದೆ. ಈ ಆದೇಶದ ನಂತರ ಪೊಲೀಸರು ಕೇಸನ್ನು ದಾಖಲಿಸಿ ಮುಂದಿನ ಕ್ರಮ ಕೈಗೊಳ್ಳುತ್ತಾರೆ. ಇಂತಹ ಪ್ರಕರಣಗಳಿಗೆ ರೆಫರ್ಡ್ ಕೇಸುಗಳು ಅಂತ ಹೇಳ್ತಾರೆ.

ಮೇಲೆ ಹೇಳಿದ ಎರಡು ತರಹದ ಕೇಸುಗಳಲ್ಲದೆ, ಇನ್ನೂ ಎರಡು ವಿಧದ ಕೇಸುಗಳಿವೆ. ಅವೆಂದರೆ ಸಿವಿಲ್ ಕೇಸ್ ಹಾಗೂ ಕ್ರಿಮಿನಲ್ ಕೇಸುಗಳು. ಸಿವಿಲ್ ಕೇಸುಗಳು ಅಂದರೆ ದಿವಾನಿ ಸ್ವರೂಪದ ಕೇಸುಗಳು. ಉದಾಹರಣೆಗೆ ನಿಮ್ಮ ಪಕ್ಕದ ಮನೆಯ ಮಾಲೀಕ ನಿಮ್ಮ ಕಾಂಪೌಂಡನ್ನು ಸೇರಿಸಿ ಒಂದು ಕೊಠಡಿ ಕಟ್ಟುತ್ತಾನೆ. ಇಲ್ಲವೇ ನಿಮ್ಮ ಬಾಡಿಗೆದಾರ ನಿಮಗೆ ಎರಡು ಮೂರು ತಿಂಗಳು ಮನೆ ಬಾಡಿಗೆ ನೀಡುವುದಿಲ್ಲ. ಇಲ್ಲವೇ ನಿಮ್ಮ ಮೋಟಾರ್ ಮೆಕ್ಯಾನಿಕ್ ನಿಮ್ಮ ವಾಹನವನ್ನು ರಿಪೇರಿ ಮಾಡಿಕೊಡ್ತೀನಿ ಅಂತ ಹೇಳಿ ತಿಂಗಳುಗಟ್ಟಲೆ ವಾಹನವನ್ನು ವಾಪಸ್ ಮಾಡೊಲ್ಲ ಅಥವಾ ನಿಮ್ಮಿಂದ ಒಂದು ಸೋಫಾಸೆಟ್ ಮಾಡಲು 5,000 ರೂ. ಅಡ್ವಾನ್ಸ್ ಪಡೆದ ಬಡಗಿ ಸೋಫಾ ಆಗಲೀ ಅಥವಾ ಅಡ್ವಾನ್ಸ್ ಆಗಲೀ ಕೊಡುವುದಿಲ್ಲ ಇತ್ಯಾದಿ .... ಇಂತಹ ಪ್ರಕರಣಗಳ ಬಗ್ಗೆ ಪೊಲೀಸರು ನೇರವಾಗಿ ಏನನ್ನು ಮಾಡಲು ಬರುವುದಿಲ್ಲ, ಏಕೆಂದರೆ ಇವು ಕ್ರಿಮಿನಲ್ ಪ್ರಕರಣಗಳು ಅಲ್ಲ. ಇಂತಹ ಕೇಸುಗಳನ್ನು ಬಗೆಹರಿಸಬೇಕಾದರೆ ನಾವು ನೇರವಾಗಿ ನ್ಯಾಯಾಲಯದ ಮೊರೆ ಹೋಗಬೇಕು. ಅಂದರೆ ಪೊಲೀಸರು ತನಿಖೆ ನಡೆಸುವಂತಹ ಪ್ರಕರಣಗಳು ಎಂದರೆ ಅವು ಕ್ರಿಮಿನಲ್ ಕೇಸುಗಳು ಆಗಿರಬೇಕು ಹಾಗೂ ಅವು ಕಾಗ್ನಿಸಬಲ್ ಕೇಸುಗಳು ಆಗಿರಬೇಕು.

ಕೆಲವು ತರಹ ಕೇಸುಗಳು ಸಂಪೂರ್ಣ ತನಿಖೆ ಮಾಡದಂತಹವೂ ಇವೆ. ಉದಾಹರಣೆಗೆ ಲೈಟಿಲ್ಲದೆ ಸೈಕಲ್ ನಡೆಸುವುದು, ರಸ್ತೆಯಲ್ಲಿ ತಳ್ಳುವ ಗಾಡಿ ಇಟ್ಟು ಸಂಚಾರಕ್ಕೆ ಅಡೆತಡೆ ಮಾಡುವುದು ಇತ್ಯಾದಿ. ಸರ್ವೇಸಾಧಾರಣವಾಗಿ ಈ ರೀತಿಯ ಪ್ರಕರಣಗಳ ಬಗ್ಗೆ ಪೊಲೀಸರು ತಾವೇ ಫಿರ್ಯಾದುದಾರರಾಗಿ ನ್ಯಾಯಾಲಯಕ್ಕೆ ದೂರು ಸಲ್ಲಿಸಿ ತಕ್ಷಣವೇ ದಂಡ ಹಾಕುವಂತೆ ಮಾಡ್ತಾರೆ. ಇವುಗಳಿಗೆ ಪೊಲೀಸ್ ಭಾಷೆಯಲ್ಲಿ ಪೆಟ್ಟಿ ಕೇಸುಗಳು (Petty Cases) ಎಂದು ಕರೀತಾರೆ.

*





# ಜನಪದರ ದೃಷ್ಟಿಯಲ್ಲಿ ಕಾಯಕ ಮತ್ತು ದಾಸೋಹ

- ಎಚ್.ಎಸ್. ಸಿದ್ಧಗಂಗಪ್ಪ,
೫೩/೧, 'ಶಿವಕೃಪ', ಮೊದಲನೆ ಮುಖ್ಯರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ,
ವಿಜಯನಗರ, ಬೆಂಗಳೂರು-೪೦

ಕರ್ನಾಟಕದ ಸಾಮಾಜಿಕ, ಸಾಹಿತ್ಯಿಕ ಹಾಗೂ ಧಾರ್ಮಿಕ ಇತಿಹಾಸದಲ್ಲಿ ೧೨ನೇ ಶತಮಾನ ಒಂದು ಪರ್ವಕಾಲ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮಾಜಿಕ ಕ್ರಾಂತಿ, ಅಲ್ಲಮಪ್ರಭುವಿನ ಸಮ್ಮುಖದಲ್ಲಿ ಬಸವಾದಿ ಶರಣರು ಅನುಭವ ಮಂಟಪದಲ್ಲಿ ನಡೆಸಿದ ವಿಚಾರ ಮಂಥನ; ಅಭಿಪ್ರಾಯಗಳನ್ನು ತಿಳಿಸುವ ಮುಕ್ತ ಅಭಿವ್ಯಕ್ತಿ ಸ್ವಾತಂತ್ರ್ಯ, ಸ್ತ್ರೀಯರು ಭಾಗವಹಿಸಿ ತಮ್ಮ ವಿಚಾರಗಳನ್ನು ಮಂಡಿಸುವ ವಾಕ್‌ಸ್ವಾತಂತ್ರ್ಯ ಇವೆಲ್ಲವೂ ಹನ್ನೆರಡನೆ ಶತಮಾನದಲ್ಲಿ ನಡೆದ ಮೈಲಿಗಲ್ಲುಗಳು. ತಮ್ಮ ಭಾವನೆಗಳನ್ನು ಅಭಿವ್ಯಕ್ತಿಸಲು ಅವರು ಜನಸಾಮಾನ್ಯರಿಗೂ ಸುಲಭವಾಗಿ ಅರ್ಥವಾಗುವಂತ 'ವಚನ'ಗಳನ್ನು ರಚಿಸಿ, ಜನಜಾಗೃತಿಯನ್ನುಂಟು ಮಾಡಿದುದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಮಹತ್ತರ ಬದಲಾವಣೆ, ಸಮಾನತೆ, ಅಸ್ಪೃಶ್ಯತೆ ನಿವಾರಣೆಗಾಗಿ ಶರಣರು ನಡೆಸಿದ ಹೋರಾಟ, ವೃತ್ತಿ ಗೌರವವನ್ನು ತಂದುಕೊಟ್ಟು ಪ್ರತಿಯೊಬ್ಬರಲ್ಲಿಯೂ ಆತ್ಮಾಭಿಮಾನವನ್ನು ಮೂಡಿಸಲು ನಡೆಸಿದ ವಿಚಾರ ಕ್ರಾಂತಿಯ ಜ್ಯೋತಿ ಬೆಳಗಿಸುವುದರ ಮೂಲಕ ಅವರ ಬದುಕಿಗೊಂದು ಅರ್ಥವನ್ನು ತಂದುಕೊಟ್ಟಿದ್ದು ಸಾಮಾನ್ಯ ವಿಚಾರವಲ್ಲ.

ಇವೆಲ್ಲದರ ಜೊತೆಗೆ ಬಸವಣ್ಣನವರು ವಿಶ್ವಕ್ಕೆ ನೀಡಿದ ಬಹುದೊಡ್ಡ ಕೊಡುಗೆ ಎಂದರೆ **'ಕಾಯಕ'** ಮತ್ತು **'ದಾಸೋಹ'**ದ ಪರಿಕಲ್ಪನೆ. ವಿಶ್ವದ ಯಾವ ಭಾಗದಲ್ಲೂ ಇಂತಹ ಸಿದ್ಧಾಂತ ಕಂಡು ಬಂದಿಲ್ಲ. ಇಂತಹ ಅಮೂಲ್ಯವಾದ ಸಿದ್ಧಾಂತವನ್ನು ಅನುಷ್ಠಾನಗೊಳಿಸಿ ವಿಶ್ವವೇ ವಿಸ್ಮಯದಿಂದ ನೋಡುವಂತೆ ಮಾಡಿದ ಕೀರ್ತಿ, ಹೆಗ್ಗಳಿಕೆ ಬಸವಾದಿ ಶರಣರಿಗೆ ಸಲ್ಲುತ್ತದೆ.

ಕಾಯಕ ಮತ್ತು ದಾಸೋಹಕ್ಕೆ ಸಂವಾದಿಯಾಗಿ ಬೇರೊಂದು ಪದಸಂಪತ್ತು ನಮಗೆ ಬೇರಾವ ಭಾಷೆಯಲ್ಲಿಯೂ ದೊರೆಯುವುದಿಲ್ಲ ಎಂಬ ವಿದ್ವಾಂಸರ ಅಭಿಪ್ರಾಯ ಈ ಸಿದ್ಧಾಂತಕ್ಕಿರುವ ಮಹತ್ವವನ್ನು ತಿಳಿಸುತ್ತದೆ.

ಬಸವಣ್ಣನವರು ರೂಪಿಸಿದ ಕಾಯಕ ಸಿದ್ಧಾಂತಕ್ಕೆ ಮೇಲು-ಕೀಳು, ಉಚ್ಚ-ನೀಚ ಎಂಬ ತಾರತಮ್ಯವಿಲ್ಲ. ತಾವು ಮಾಡುವ ವೃತ್ತಿಯಲ್ಲಿಯೇ ಕೈಲಾಸವನ್ನು ಕಾಣುವ ದಾರ್ಶನಿಕತೆ. ಕಷ್ಟಪಟ್ಟು ದುಡಿದು ಮಾಡಿದ ಕಾಯಕಕ್ಕೆ ಅವರು ಮಹತ್ವವನ್ನು ಕೊಟ್ಟರು. ಕಾಯಕ ಮಾಡುವಲ್ಲಿಯೂ ನೀತಿ-ನಿಯಮವನ್ನು ಪಾಲಿಸಬೇಕಾಗಿತ್ತು. ಸತ್ಯ, ನೀತಿ, ಪ್ರಾಮಾಣಿಕತೆಯ ನೆಲೆಗಟ್ಟಿನ ಮೇಲೆ ನಿಂತು ತ್ರಿಕರಣಶುದ್ಧಿಯಾಗಿ ಕಾಯಕವನ್ನು ಮಾಡಿ, ಅದರಿಂದ ಬಂದ ಪ್ರತಿಫಲದಲ್ಲಿ ತನಗೆ ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ಸಮಾಜಕ್ಕೆ 'ದಾಸೋಹ' ರೂಪದಲ್ಲಿ ವಿತರಿಸುವುದರ ಮೂಲಕ ಸಂತೋಷ, ತೃಪ್ತಿ ನೆಮ್ಮದಿಯನ್ನು ಕಾಣುತ್ತಿದ್ದರು. ಬಸವಣ್ಣನವರು ರೂಪಿಸಿದ ಕಾಯಕ ಮತ್ತು ದಾಸೋಹ ಸಿದ್ಧಾಂತದಲ್ಲಿ ನಾಳಿನ ಬದುಕಿಗಾಗಿ ಕೂಡಿಡುವುದಕ್ಕೆ ಅವಕಾಶವಿರಲಿಲ್ಲ. ಅಂದಂದಿನ ಗಳಿಕೆ ಅಂದಂದೇ ವಿನಿಯೋಗವಾಗಬೇಕಿತ್ತು. ಕಷ್ಟಪಡದೆ, ದೇಹವನ್ನು ದಂಡಿಸದೆ ಗಳಿಸಿದುದನ್ನು ದಾಸೋಹಕ್ಕೆ ವಿನಿಯೋಗಿಸುವಂತಿರಲಿಲ್ಲ. ಮೋಸ, ವಂಚನೆ, ಅನೀತಿ ಇವುಗಳಿಂದ ಗಳಿಸಿದ ಸಂಪತ್ತು ದಾಸೋಹಕ್ಕೆ ಅನರ್ಹ ಎಂಬುದನ್ನು ಕಟುವಾಗಿಯೇ ಹೇಳಿದರು. **'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದು'** ಎಂಬುದು ಅವರ ಖಚಿತವಾದ ನಿಲುವಾಗಿತ್ತು. ಕಾಯಕ ಮತ್ತು ದಾಸೋಹ ತತ್ವದಲ್ಲಿ ಸ್ವಾವಲಂಬನೆ, ಸ್ವಾಭಿಮಾನ, ಸಹಕಾರ, ಸಂತೃಪ್ತಿ ಅಡಕವಾಗಿರುವುದು ವ್ಯಕ್ತವಾಗುತ್ತದೆ.

ಬಸವಣ್ಣನವರು ರೂಪಿಸಿದ ಕಾಯಕ ಮತ್ತು ದಾಸೋಹ ಪರಿಕಲ್ಪನೆ ನಮ್ಮ ಜನಪದರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಬಸವಪೂರ್ವ ಯುಗದಲ್ಲಿ ಈ ಸಂಪ್ರದಾಯ ಅನುಷ್ಠಾನದಲ್ಲಿದ್ದರೂ ಅದಕ್ಕೊಂದು ಮಹತ್ವ, ಮನ್ನಣೆ, ಗೌರವ ಬಂದುದು ಬಸವಣ್ಣನವರ ನಂತರ ಎಂಬುದು ಜನಪದ ತ್ರಿಪದಿಗಳಿಂದ ತಿಳಿದು ಬರುತ್ತದೆ.

ನಮ್ಮ ಗ್ರಾಮೀಣರು ಪ್ರಕೃತಿಯ ಆರಾಧಕರು. ಅವರು ತಮ್ಮ ಬಹುತೇಕ ವೇಳೆಯನ್ನು ನಿಸರ್ಗದ ಮಡಿಲಲ್ಲಿ ಕಳೆಯುವುದರೊಂದಿಗೆ ಪ್ರಕೃತಿಯೊಂದಿಗೆ ಅವಿನಾಭಾವ

ಸಂಬಂಧವನ್ನಿಟ್ಟುಕೊಂಡಿದ್ದಾರೆ. ಅವರು ಪ್ರಕೃತಿಯ ಹಾಗೂ ಪ್ರಾಣಿ-ಪಕ್ಷಿಗಳ ಜೀವನ ವಿಧಾನದಲ್ಲಿಯೂ ಕಾಯಕ ತತ್ವವನ್ನು ಕಂಡು ತಮ್ಮ ಭಾವನೆಗಳನ್ನು ಮುಕ್ತವಾಗಿ ಹಂಚಿಕೊಂಡಿದ್ದಾರೆ.

*ಕೋಳಿ ಕೂಗಿತು ಕೂಗಿ ಹೇಳುತಲಿ ಜಗಕ್ಕೆಲ್ಲ*
*ಇಳೆ ಬೆಳಗುವೊಡೆಯ ಬಂದೆಂದು ಗುಂಗಿಗಳ*
*ಬಳಗೆದ್ದು ಹಾಡಿ ಬನದೊಳಗೆ*

*ಮೂಡಲದ ಕೆಂಪಿನೊಳು ಹಾಡಿದವು ಹಕ್ಕಿಗಳು*
*ನಾಡನುಂಗುತಲಿ ಹೂ ಬಿಸಿಲು-ಕತ್ತಲೆಯು*
*ಓಡಿ ಪಡುವಣಕೆ ದಿನಕಂಜಿ.*

ಪ್ರಾಣಿ ಪಕ್ಷಿಗಳು ತಮ್ಮ ದಿನನಿತ್ಯದ ಕಾಯಕವನ್ನು ಚಾಚೂ ತಪ್ಪದೆ ಮಾಡುತ್ತಿರುವಾಗ, ಅವುಗಳಿಗಿಂತ ಬುದ್ಧಿವಂತರಾದ, ಆಲೋಚನೆ ಮಾಡುವ ಶಕ್ತಿಯನ್ನು ಹೊಂದಿರುವ ಮನುಷ್ಯರು ತಮ್ಮ ಕಾಯಕವನ್ನು ಮಾಡದಿದ್ದರೆ ಹೇಗೆ? ಹಾಗೆ ಅವರು ತಮ್ಮ ತಮ್ಮ ಕಾರ್ಯವನ್ನು ಮಾಡಿದಿದ್ದರೆ ಪ್ರಾಣಿ ಪಕ್ಷಿಗಳಿಗಿಂತ ಕಡೆ, ಕೀಳು ಎಂಬ ಮಾತನ್ನು ಮಾರ್ಮಿಕವಾಗಿ ನಮ್ಮ ಜನಪದರು ಪರಿಚಯ ಮಾಡಿಕೊಟ್ಟಿದ್ದಾರೆ.

ರೈತರಿಗೆ ಸುಗ್ಗಿಯ ಕಾಲ. ಹರ್ಷದ ಹೊನಲನ್ನು ಹರಿಸುವ ಒಂದು ವಿಶೇಷ ಸಂದರ್ಭ. ಹಿಡಿಯಾಗಿ ಬಿತ್ತಿದ ಕಾಳು ಕಣದಲ್ಲಿ ರಾಶಿಯಾಗಿರುವುದನ್ನು ಕಂಡಾಗ ಅವರಿಗೆ ಸಂತೋಷ-ಸಂಭ್ರಮ. ಅದು ಅವರಿಗೆ ಸತ್ಯಶುದ್ಧ ಕಾಯಕದಿಂದ ಸಂದ ಪ್ರತಿಫಲ. ಜನಪದರೇ ಅಭಿವ್ಯಕ್ತಪಡಿಸಿರುವಂತೆ ಹೊಲದ ಸುಗ್ಗಿ ಅವರ ದೃಷ್ಟಿಯಲ್ಲಿ,

*ನೂರೊಂದು ಶರಣರು ನೂರೊಂದು ಬಂಟಾರು*
*ಸಾರಿ ಹೇಳ್ಯಾನೋ ಒಕ್ಕಲಿಗೂ - ಹೊಲಸುಗ್ಗಿ*
*ಧೀರ ಕಾಯದ ದಿನವೆಂದು.*

ವರ್ಷವೆಲ್ಲ ಅವನು ಕಾಯಕದಿಂದ ಸುರಿಸಿದ ಬೆವರಿನ ಒಂದೊಂದು ಹನಿಯೂ ಸಹಸ್ರ ಸಹಸ್ರ ಕಾಳುಗಳಾಗಿ ಕಣವನ್ನು ಸೇರಿದಾಗ ಅವನಿಗಾಗುವ ಆನಂದ ವರ್ಣನಾತೀತ. ಅವನಿಗೆ ಅವು ಬರೀ ಕಾಳುಗಳಲ್ಲ, ಸ್ವಾತಿಯ ಮುತ್ತುಗಳು. ಅವನು ಹೀಗೆ ಕಾಯಕದಿಂದ ಗಳಿಸಿದ ಫಲದ ಸ್ವಲ್ಪಭಾಗವನ್ನು ಸಮಾಜಕ್ಕೆ ಸದ್ವಿನಿಯೋಗ ಮಾಡುವ ರೀತಿ ಅವನಲ್ಲಿ ಮನೆಮಾಡಿಕೊಂಡಿರುವ ಉದಾತ್ತಗುಣದ ದ್ಯೋತಕ.

ಕಾಯಕ ಮತ್ತು ದಾಸೋಹ ನಮ್ಮ ಸಮಾಜದಲ್ಲಿ ಶತಶತಮಾನಗಳಿಂದ ನಡೆದುಕೊಂಡು ಬಂದಿದ್ದರೂ ಅದಕ್ಕೆ ಒಂದು ನಿಜವಾದ ಅರ್ಥ, ಮೌಲ್ಯ ಬಂದಿದ್ದು ಬಸವಣ್ಣನವರಿಂದ. ಪ್ರತಿಯೊಬ್ಬರ ಜೀವನದಲ್ಲಿ ಕಾಯಕ ಮತ್ತು ದಾಸೋಹ ಒಂದೇ ನಾಣ್ಯದ ಎರಡು ಮುಖಗಳಂತೆ ಅವಿಭಾಜ್ಯ ಅಂಗವಾಗಿತ್ತು. ಅದರ ಪ್ರಭಾವ ಜನಪದರ ಮೇಲೂ ಉಂಟಾಗಿರುವುದು ಜನಪದ ತ್ರಿಪದಿಗಳಿಂದ ಸ್ಪಷ್ಟವಾಗುತ್ತದೆ.

ಬಸವಾದಿ ಶರಣರ ನಂತರ ಕರ್ನಾಟಕದಲ್ಲಿ ಕಾಯಕ ಮತ್ತು ದಾಸೋಹದ ಹಿನ್ನೆಲೆಯಲ್ಲಿ ನೂರಾರು ವಿರಕ್ತ ಮಠಗಳು ಆರಂಭವಾದವು. ಈ ಮಠಗಳು ಕಾಯಕದ ಮಹತ್ವವನ್ನು ಮನವರಿಕೆ ಮಾಡಿಕೊಡುವುದರ ಜೊತೆಗೆ 'ದಾಸೋಹ' ಕಾರ್ಯವನ್ನು ಮಾಡುತ್ತಾ ಬಂದವು. ಮಠಗಳು ಸಾಮಾಜಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಮಾರ್ಗದರ್ಶನ ನೀಡುತ್ತಾ ಬಂದವು. ಅವುಗಳು ಮಾಡುವ ಸಾಮಾಜಿಕ ಕಾರ್ಯಕ್ಕೆ ತಮ್ಮ ಕೈಲಾದಷ್ಟು ಸಹಾಯ ಮಾಡುವ ಸದುದ್ದೇಶದಿಂದ ಜನಪದರು ಸುಗ್ಗಿಯ ಕಾಲದಲ್ಲಿ ತಾವು ಬೆವರು ಸುರಿಸಿ ಬೆಳೆದ ದವಸ, ಧಾನ್ಯಗಳಲ್ಲಿ ಒಂದು ಪಾಲನ್ನು ಮಠಗಳಿಗೆ ನೀಡುವುದರ ಮೂಲಕ ನೈತಿಕ ಬೆಂಬಲವನ್ನು ವ್ಯಕ್ತಪಡಿಸುತ್ತಿದ್ದರು. ಅದಕ್ಕಾಗಿ ಅವರು ಸುಗ್ಗಿಯ ಕಾಲದಲ್ಲಿ ಕಣದಲ್ಲಿ ರಾಶಿಯ ಒಂದಿಷ್ಟು ಭಾಗವನ್ನು ಇಂಥ ಮಠಗಳಿಗೆಂದು ಮೀಸಲಾಗಿಡುತ್ತಿದ್ದರು. ಹಾಗೆ ಮಾಡಿದರೆ ಅವರಿಗೆ ಸಂತೋಷ, ನೆಮ್ಮದಿ. ತಾವು ಕಷ್ಟಪಟ್ಟು ದುಡಿದದ್ದು ಸಾರ್ಥಕವಾಯಿತು ಎಂಬ ಧನ್ಯತೆಯ ಭಾವನೆ. ಈ ಸಂಪ್ರದಾಯ ಈಗಲೂ ಮುಂದುವರೆದುಕೊಂಡು ಬಂದಿದೆ. ಮಠಗಳಿಗೆ, ಜಂಗಮರಿಗೆ ಮುಡುಪು ತೆಗೆದಿಟ್ಟರೆ ಕಣದ ಕೆಲಸಗಳು ಸುಸೂತ್ರವಾಗುತ್ತವೆ, ರಾಶಿ ಹೆಚ್ಚುತ್ತದೆ ಎಂಬ ಅಚಲ ನಂಬಿಕೆ.

*ರಾಸಿಗಾಳಿಯು ಬೀಸಿ ಸೂಸಿ ಹರಿಯಿತು ಕಣವು*
*ಕೂಸ ಕೋಳೂರ ಕಡಗಾಳಿ - ಬೀಸಿಂದು*
*ಮೀಸಲೀ ರಾಶಿ ಜಂಗಮಕೆ*

*ಹಿಂಗಾರಿ ಬೆಳಗಾಗಿ ಮುಂಗರವ ಬೆಳಬಂದು*
*ಟೆಂಗ ಬಿಳಿಜೋಳ ಒಕ್ಕುವುದು - ಬೆಳವಲವು*
*ಜಂಗಮಗೆ ಎಡೆಯು ಹೊಸ ಬೆಳಸು*

ಹಿಂದೆ ರೈತರು ತಾವು ಬೆಳೆದ ಎಲ್ಲ ಬೆಳೆಗಳ ಮೊದಲಿನ ಬೀಡನ್ನು ತಮಗೆ ಸಮೀಪವಿದ್ದ ಮಠಗಳಿಗೆ ಭಕ್ತಿಯಿಂದ ಅರ್ಪಿಸಿ ಕೃತಾರ್ಥರಾಗುತ್ತಿದ್ದರು. ಅವರು ತಾವು ಬೆಳೆದ ಬೆಳೆಯ ಪ್ರಮಾಣಕ್ಕೆ ಅನುಗುಣವಾಗಿ ಸಲ್ಲಿಸುವುದರ





ಮೂಲಕ ತಾವು ನಂಬಿಕೊಂಡು ಬಂದ ಸಂಪ್ರದಾಯ ಪರಂಪರೆಯನ್ನು ಮುಂದುವರೆಸಿಕೊಂಡು ಬರುತ್ತಿರುವುದನ್ನು ಈಗಲೂ ಕಾಣಬಹುದಾಗಿದೆ.

ನಾಡಿನ ಸಾಮಾಜಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸುವುದರ ಮೂಲಕ ಬಡವರು, ಹಿಂದುಳಿದವರು ಹಾಗೂ ದೀನದಲಿತರ ಪಾಲಿಗೆ ಆಶಾಜ್ಯೋತಿಯಾಗುವುದರ ಮೂಲಕ ರಾಷ್ಟ್ರದ ಗಮನವನ್ನು ಸೆಳೆದಿರುವ ಶ್ರೀ ಸಿದ್ಧಗಂಗಾ ಮಠಕ್ಕೆ ಸಮೀಪದಲ್ಲಿಯೇ ನಮ್ಮ ಹಳ್ಳಿಯಿದೆ. ನಾನು ಚಿಕ್ಕವನಾಗಿದ್ದಾಗ ಸುಗ್ಗಿಯ ಕಾಲದಲ್ಲಿ ಊರಿನ ಕೆಲವು ಜನ ಮುಖಂಡರು, ಅಭಿಮಾನಿಗಳು ಶ್ರೀಮಠಕ್ಕೆ ರೈತರು ಸುಗ್ಗಿಯ ಕಾಲದಲ್ಲಿ ಮುಡುಪಾಗಿ ತೆಗೆದಿಟ್ಟ ದವಸ, ಧಾನ್ಯಗಳು, ಹುಣಿಸೆಹಣ್ಣು, ಕುಂಬಳಕಾಯಿ, ಬೆಲ್ಲ ಮೊದಲಾದವುಗಳನ್ನು ಸಂಗ್ರಹಿಸಿ ಎತ್ತಿನ ಗಾಡಿಗಳಲ್ಲಿ ತೆಗೆದುಕೊಂಡು ಹೋಗಿ ಮಠಕ್ಕೆ ಅರ್ಪಿಸಿ ಬರುತ್ತಿದ್ದರು. ಈ ಕಾರ್ಯದಲ್ಲಿ ಎಲ್ಲರೂ ಸಂತೋಷದಿಂದ ಭಾಗವಹಿಸುತ್ತಿದ್ದರು. ತಾವು ಬೆವರು ಸುರಿಸಿ ದುಡಿದ ಬೆಳೆಯಲ್ಲಿ ಸ್ವಲ್ಪ ಭಾಗವಾದರೂ ಸದ್ವಿನಿಯೋಗವಾಗುತ್ತಿರುವುದಕ್ಕೆ ಸಂತೋಷಪಡುತ್ತಿದ್ದರು. ತಾವು ಬೆಳೆಯುತ್ತಿದ್ದ ಮೊದಲ ಬೀಡನ್ನು ಮಠಕ್ಕೆ ಸಲ್ಲಿಸಬೇಕೆಂಬ ಬಯಕೆ ಅವರಲ್ಲಿ ಎಷ್ಟರಮಟ್ಟಿಗೆ ತೀವ್ರವಾಗಿತ್ತೆಂದರೆ ಮುಡುಪಾಗಿಟ್ಟ ಪದಾರ್ಥವನ್ನು ಯಾವುದೇ ಕಾರಣಕ್ಕೂ ವೈಯಕ್ತಿಕವಾಗಲಿ ಅಥವಾ ಬೇರೆ ಕಾರಣಗಳಿಗಾಗಲಿ ಎಂಥ ಪರಿಸ್ಥಿತಿ ಬಂದರೂ ಬಳಸುತ್ತಿರಲಿಲ್ಲ. ಅದು ಅವರ ಪಾಲಿಗೆ ದೇವರಾಗಿ ಕಾಣುತ್ತಿತ್ತು. ಆ ಪದಾರ್ಥಗಳ ಬಗ್ಗೆ ಅವರು ಅಷ್ಟೊಂದು ಪ್ರೀತಿ, ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು.

ಈಗ ಸಂಪ್ರದಾಯದಲ್ಲಿ ಸ್ವಲ್ಪ ಬದಲಾವಣೆಯಾಗಿದೆ. ಊರುಗಳಲ್ಲಿ ನಡೆಯುತ್ತಿದ್ದ ಸಾಮೂಹಿಕ ಸಂಗ್ರಹ ಕಡಿಮೆಯಾಗಿದೆ. ಹಳ್ಳಿಹಳ್ಳಿಗಳಲ್ಲಿ ರಾಜಕೀಯದ ಬಿಸಿಗಾಳಿ ಬೀಸತೊಡಗಿ ಸದುದ್ದೇಶದಿಂದ ಸಮಾಜಸೇವೆ ಮಾಡುವವರ ಮೇಲೆ ವಿನಾಕಾರಣ ಅನುಮಾನ, ಆರೋಪ ಮಾಡುತ್ತಿರುವುದರಿಂದ ಸಮಾಜ ಕಾರ್ಯಕರ್ತರು ಈ ಕೀಳು ರಾಜಕೀಯದಿಂದ ಬೇಸತ್ತು ಹಿಂದೆ ಸರಿಯುತ್ತಿದ್ದಾರೆ. ಹೀಗಾಗಿ ಹಳ್ಳಿಗಳಲ್ಲಿ ನಾನು ಚಿಕ್ಕಂದಿನಲ್ಲಿ ಕಾಣುತ್ತಿದ್ದ ಉತ್ಸಾಹ ಈಗ ಮರೆಯಾಗಿದ್ದರೂ, ರೈತರು ತಾವು ಮೊದಲಿನಿಂದಲೂ ಪಾಲಿಸಿಕೊಂಡು ಬಂದ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬರುತ್ತಿರುವುದು ಸಂತೋಷದ ಸಂಗತಿ. ತಾವು ತೆಗೆದಿಟ್ಟ ಮುಡುಪನ್ನು ಜಾತ್ರೆಯ ಸಂದರ್ಭದಲ್ಲಿ ತಾವೇ ತೆಗೆದುಕೊಂಡು ಹೋಗಿ ಅರ್ಪಿಸಿ ಬರುತ್ತಿದ್ದಾರೆ.

*ನಿನ್ನ ಹೆಸರಿನ ಹಂತಿ ಹೊನ್ನು ಮುತ್ತಿನ ರಾಶಿ*
*ಹಣ್ಣಾದ ಮನಸಿನೊಕ್ಕಲಿಗ - ಒಕ್ಕೂವದು*
*ತನ್ನ ಶಿವಭಕ್ತಿ ದಾಸೋಹ*

*ನೇಗಿ ಹೂಡಿದ ಜೇಡ, ನೇಗಲಿಯ ಒಕ್ಕಲಿಗ*
*ಹಾಗಿನಲಿ ಹಾದಿ ಹುಲುಸಾಗಿ - ಭೂಲೋಕ*
*ತೂಗಿ ತೂನೆಯುವುದು ಬೆಳೆತುಂಬಿ*

*ಚಿಕ್ಕ ಮಾದನ ಹಾಡು, ಉಕ್ಕಿಸಿತು ತೆನೆರಾಶಿ*
*ಒಕ್ಕುದಕೆ ಸೋತು ಒಕ್ಕಲಿಗ - ಜಂಗಮಕೆ*
*ತಿಕ್ಕಿ ತಕ್ಕೆಯಲಿ ಉರಿತುಂಬಿ*

ರೈತರ ಮುಗ್ಧ ಭಕ್ತಿಗೆ ಶಿವ ಮೆಚ್ಚಿ ತೆನೆರಾಶಿ ಹೆಚ್ಚುವಂತೆ ಕರುಣಿಸುತ್ತಾನೆ. ಇದರಿಂದ ಸಂತಸಗೊಂಡ ರೈತ ಕಣಕ್ಕೆ ಬಂದ ಜೋಗಿ-ಜಂಗಮರಿಗೆ, ಬಡವರಿಗೆ ತೆಕ್ಕೆತುಂಬ ತಬ್ಬಿ ದಾನ ಮಾಡುತ್ತಾರೆ. ಈ ದಾನ ಬೇರೊಬ್ಬರನ್ನು ಮೆಚ್ಚಿಸುವುದಕ್ಕೆ ಅಲ್ಲ; ಅವರ ಹೃದಯಾಂತರಾಳದಿಂದ ಮೂಡಿಬಂದ ಸದ್ಭಾವನೆ, ಸ್ವಾರ್ಥರಹಿತವಾದ ಕೊಡುವಿಕೆಯಲ್ಲಿ ಅವರಿಗೆ ಎಲ್ಲಿಲ್ಲದ ತೃಪ್ತಿ. ಶಿವಕೊಟ್ಟಿದ್ದನ್ನು ಶಿವನಿಗೇ ಅರ್ಪಿಸುವ ದಾರ್ಶನಿಕ ಭಾವನೆ!

ತಾವು ಗಳಿಸಿದ್ದನ್ನು ತಾನು, ತನ್ನ ಸಂಸಾರ ಅನುಭವಿಸಿದರೆ ಸಾಲದು. ಜಂಗಮರು, ಬಡವರು, ದೀನ-ದಲಿತರೂ ಸ್ವಲ್ಪ ಭಾಗವನ್ನು ಬಳಸುವಂತಾಗಬೇಕು ಎಂಬ ಸದುದ್ದೇಶ ಅವರಿಗೆ ಬಸವಾದಿ ಶರಣರಿಂದ ಬಂದ ಬಳುವಳಿ!

ವಿಶ್ವಭ್ರಾತೃತ್ವ ಹಾಗೂ ಸಮಾನತೆಯ ನೆಲೆಗಟ್ಟಿನಲ್ಲಿ ರೂಪುಗೊಂಡ ಕಾಯಕ ಮತ್ತು ದಾಸೋಹದ ಪರಿಕಲ್ಪನೆ ಶರಣರು ವಿಶ್ವಕ್ಕೆ ನೀಡಿದ ಅತ್ಯಮೂಲ್ಯ ಕೊಡುಗೆ. ಉನ್ನತವಾದ ಧ್ಯೇಯೋದ್ದೇಶಗಳಿಂದ ಕೂಡಿದ ಕಾಣಿಕೆಯನ್ನು ನೀಡುವುದರ ಮೂಲಕ ಕರ್ನಾಟಕದ ಕೀರ್ತಿಯನ್ನು ವಿಶ್ವಮಟ್ಟಕ್ಕೇರಿಸಿದ ಹಿರಿಮೆ ಬಸವಾದಿ ಶರಣರಿಗೆ ಸಲ್ಲುತ್ತದೆ. ನಮ್ಮ ಜನಪದರ ದೃಷ್ಟಿಯಲ್ಲಿ ಬಸವಣ್ಣ ಕಾಯಕ ಮತ್ತು ದಾಸೋಹ ಸಿದ್ಧಾಂತಗಳ ಸೃಷ್ಟಿಕರ್ತ. ಅವನು ಪರಮ ಮಂಗಳಮೂರ್ತಿ. ಅವರು ಬಸವಣ್ಣನನ್ನು ಕುರಿತು ಮನದುಂಬಿ ಹಾಡಿದ್ದಾರೆ.

*ಕಾಯಕದ ಕಲಿಸುದಕ ನಾಯಕನು ಬಸವಯ್ಯ*
*ಜೀಯ ಹೊಸ ಮತಕೆ ಶಿವಭಕ್ತಿ - ಸಾರುದಕೆ*
*ರಾಯ ಜೀವನದ ಹೊಸ ನುಡಿಗೆ*

*ದಾಸೋಹಿ ಬಸವಣ್ಣ ದಾಸೋಹ ಕಲಿಸಿದನು*
*ದೇಶ ದೇಶೆಲ್ಲ ಕೇಳುತಲಿ - ಹೊಸಮಾತ*
*ಮಾಸಿದವು ವೇದ ಹುಸಿಯೆಂದು*

*ಅರ್ಪಣೆಯು ಅನುಭಾವ ಹೆಪ್ಪುಗಟ್ಟಿತು ಲೋಕ*
*ಬೆಪ್ಪಾತು ನಾಕ ಕಾಯಕದ - ಹಾಲ್ಹೊಳೆಯ*
*ತೆಪ್ಪ ದಾಸೋಹ ತೇಲುತಲಿ*

'ಕಾಯಕವೇ ಕೈಲಾಸ' ಎಂಬ ಬಸವಣ್ಣನವರ ಆದರ್ಶವನ್ನು ಜೀವನದಲ್ಲಿ ಅಳವಡಿಸಿಕೊಂಡ ರೈತ ಸಮುದಾಯಕ್ಕೆ ಕೈಲಾಸಕ್ಕಿಂತ ತಾವು ದಿನನಿತ್ಯವೂ ಮಾಡುವ ಕಾಯಕ ಹಾಗೂ ಶರಣರಿಗೆ ಮಾಡುವ ದಾಸೋಹವೇ ಶ್ರೇಷ್ಠ ಎಂದು ಹೇಳುವಲ್ಲಿ ಅವರು ಕಾಯಕಕ್ಕೆ ಕೊಟ್ಟ ಮಹತ್ವದ ಪರಿಚಯವಾಗುತ್ತದೆ.

*ಶಿವ ನೀನು ಹರಸಿದರೆ ಭವದೊಳಗೆ ಹೆಚ್ಚಿನಡೆ*
*ಶಿವಪದಕೆ ಮಿಗಿಲು ಕಾಯಕವು - ಜಗದೊಳಗೆ*
*ಶಿವಮತಕೆ ಮಾಡು ದಾಸೋಹ*

ಎನ್ನುವ ಗ್ರಾಮೀಣರು ತಾವು ಮಾಡುವ ಕಾಯಕ, ಶರಣರ ಸೇವೆ ಸ್ವರ್ಗ ಸುಖಕ್ಕಿಂತ ಮಿಗಿಲಾದುದು ಎಂದು ಶಿವನಿಗೆ ಸವಾಲು ಹಾಕುವ ಅವರ ಮುಗ್ಧಭಕ್ತಿ ಅನನ್ಯವಾದುದು, ಅನುಕರಣೀಯವಾದುದು.

*ನಿನ್ನ ಸಗ್ಗಕ್ಕೆ ಹೆಚ್ಚು ನನ್ನ ಕಾಯಕ ಶಿವನೆ*
*ನನ್ನಿಯಲಿ ಸೇವೆ ಶರಣರಿಗೆ - ಸಲ್ಲಿಸಲು*
*ಹೊನ್ನ ಬೆಳೆ ನಿಜವು ಜಗದೊಳಗೆ*

ಎಂದಿದ್ದಾರೆ. ಅವರು ಶಿವನಲ್ಲಿ ಭಕ್ತಿಯಿಂದ ಬೇಡುವುದು ಕೈಲಾಸ ಪದವಿಗಿಂತ ಶಿವಶರಣರ ಸೇವೆ ಮಾಡುವ ಭಾಗ್ಯವನ್ನು ಕರುಣಿಸು ಎಂದು. ಜಗತ್ತಿನಲ್ಲಿ ಮಾಡುವ ಕಾಯಕ ನೀನು ನೀಡುವ ಕೈಲಾಸ ಪದವಿಗಿಂತಲೂ ಮಿಗಿಲಾದ ಸುಖವನ್ನು ನೀಡುತ್ತದೆ. ತಾವು ಮಾಡುವ ಕಾಯಕವೇ ಲಿಂಗಪೂಜೆ, ಶಿವಪೂಜೆ, ಅದೇ ನಮಗೆ ಕೈಲಾಸ ಎಂದು ಮನದುಂಬಿ ಹಾಡಿದ್ದಾರೆ. ನೂರು ಮಾತಿನಲ್ಲಿ ಹೇಳಬಹುದಾದುದನ್ನು ಮೂರು ಸಾಲಿನ ತ್ರಿಪದಿಯಲ್ಲಿ ತಮ್ಮ ಭಾವನೆಯನ್ನು ಹಂಚಿಕೊಂಡಿದ್ದಾರೆ.

*ಬೇಡೆನಗೆ ಕೈಲಾಸ ನೀಡೆನಗೆ ಶಿವಭಕ್ತಿ*
*ಮಾಡುವೆನು ಸೇವೆ ಶಿವಮತಕೆ - ಶರಣರಿಗೆ*
*ನಾಡ ಕಾಯಕವೆ ಕೈಲಾಸ*

*ಕಾಯಕವೆ ಶಿವಭಕ್ತಿ ಕಾಯಕವೆ ಶಿವಭಜನೆ*
*ಕಾಯಕವೆ ಲಿಂಗ ಶಿವಪೂಜೆ - ಶಿವಯೋಗ*
*ಕಾಯಕವೆ ಕಾಯ್ವ ಕೈಲಾಸ*

ದುಡಿಮೆಯಲ್ಲಿ ದೇವರನ್ನು ಕಂಡವರು ಶರಣರು. ಕಾಯಕದಲ್ಲಿ ನಿರತರಾಗಿದ್ದಾಗ ಸಾಕ್ಷಾತ್ ಶಿವನೇ ಬಂದು ನಿಂತರೂ ಕಡೆಗಣ್ಣಿನಿಂದಲೂ ನೋಡದ ಕಾಯಕ ಶ್ರದ್ಧೆ, ನಿಷ್ಠೆ ಅವರದು. ತಾವು ಮಾಡುವ ಕಾಯಕದಲ್ಲಿ ಶಿವನನ್ನು ಕಾಣುವ ಅನುಭಾವ ಅವರದು.

*ಶಿವಬಂದು ನಿಂತಿರಲು ಶಿವಭಕ್ತ ಗುಂಡಯ್ಯ*
*ಶಿವನೆಂಬುದರಿಯ ಕಾಯಕದ - ಗುಂಗಿನೊಳು*
*ಭವದೊಳಗೆ ಮಡಕೆ ನುಡಿಸುತಲಿ*

ಶಿವಶರಣ ಗುಂಡಯ್ಯನಂತೆ ಸಾವಿರಾರು ಜನ ಶರಣರು ತಾವು ಮಾಡುವ ವೃತ್ತಿಯಲ್ಲಿ ಶಿವನನ್ನು ಕಂಡವರು. ಗುಂಡಯ್ಯ ಹೇಳುವಂತೆ ಕೈಲಾಸ ಪದವಿಗಿಂತ ತಾನು ಮಾಡುವ ಕಾಯಕವೇ ಶ್ರೇಷ್ಠ. ಅಂಥ ಕಾಯಕವ ಮಾಡುವ ಯೋಗವನ್ನು ಕರುಣಿಸು ಎಂದು ನಿರ್ಮಲ ಮನಸ್ಸಿನಿಂದ ಬೇಡಿಕೊಂಡಿದ್ದಾರೆ.

*ಬೇಡೆನಗೆ ಕೈಲಾಸ ಬಾಡುವುದು ಕಾಯಕವು*
*ನೀಡೆನಗೆ ಶಿವನೆ ಕಾಯಕವ - ಕುಣಿದಾಡಿ*
*ನಾಡ ಹಂದರಕೆ ಹಬ್ಬಿಸುವೆ*

ಬಸವಣ್ಣನವರು ಪ್ರತಿಪಾದಿಸಿದ ಕಾಯಕ-ದಾಸೋಹ ಸಿದ್ಧಾಂತವನ್ನು ಪ್ರತಿಯೊಬ್ಬರೂ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಕ್ಕೆ ತಂದರೆ ಸಮಾಜದಲ್ಲಿ ತಾಂಡವವಾಡುತ್ತಿರುವ ಆರ್ಥಿಕ ಅಸಮಾನತೆ, ಸಾಮಾಜಿಕ ಅಸಮಾನತೆಯ ಕಂದಕ ಕಡಿಮೆಯಾಗಿ ನೆಮ್ಮದಿ, ಸಂತೃಪ್ತಿಯ ಜೀವನಕ್ಕೆ ಭದ್ರ ಬುನಾದಿಯಾಗುತ್ತದೆ. ಜೀವನದಲ್ಲಿ ಸುಖ, ಸಂತೋಷದ ತಂಗಾಳಿ ಬೀಸುತ್ತದೆ.

(ಕೃತಜ್ಞತೆ : ಇಲ್ಲಿ ಬಳಸಿಕೊಂಡಿರುವ ಜನಪದ ತ್ರಿಪದಿಗಳನ್ನು ಡಾ. ಬಿ.ಎಸ್. ಗದ್ದಿಗಿಮಠ ಅವರು ಸಂಪಾದಿಸಿರುವ 'ಕನ್ನಡ ಜನಪದ ಗೀತೆಗಳು' ಸಂಗ್ರಹದಿಂದ ಆರಿಸಿಕೊಳ್ಳಲಾಗಿದೆ)





ನಿಮಗಿದು ತಿಳಿದಿರಲಿ

# ವಿಷ್ಣು ಕ್ರಾಂತಿ ಸೊಪ್ಪು



ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

ವಿಷ್ಣು ಕ್ರಾಂತಿಸೊಪ್ಪನ್ನು ಆಹಾರದ ರೂಪವಾಗಿ ಉಪಯೋಗಿಸುವ ಪದ್ಧತಿಯು ಯಾವ ದೇಶದಲ್ಲಿಯೂ ವಿಶೇಷವಾಗಿಲ್ಲ. ಔಷಧ ರೂಪವಾಗಿಯೂ ಇದನ್ನು ಹೆಚ್ಚಾಗಿ ಯಾರೂ ಉಪಯೋಗಿಸುತ್ತಿಲ್ಲ. ಈ ಸೊಪ್ಪನ್ನು ಇತರ ಸೊಪ್ಪುಗಳಂತೆ ಬೆಳೆಯಿಸುವುದೂ ಕಡಿಮೆ. ಇದರ ರುಚಿಯು ಸ್ವಲ್ಪ ಕಹಿಯಾಗಿರುವುದರಿಂದ ಇದರಲ್ಲಿ ಜನಗಳ ಅಭಿರುಚಿಯು ಕಡಿಮೆಯಾಗಿದೆ. ಎಲ್ಲಾ ದೇಶಗಳಲ್ಲಿಯೂ ಈ ಸೊಪ್ಪನ್ನು ಜ್ವರದ ರೋಗಿಗಳಿಗೆ ಆಹಾರರೂಪವಾಗಿ ಸಾರನ್ನು ಮಾಡಿಕೊಡುವ ರೂಢಿ ಇರುವುದರಿಂದ ಸಾಮಾನ್ಯವಾಗಿ ಜನಗಳು ಇದರ ಗುಣದಿಂದ ಪರಿಚಿತರಾಗಿಯೇ ಇರುತ್ತಾರೆ. ಇದರಲ್ಲಿ ಬಿಳುಪು ಮತ್ತು ನೀಲವರ್ಣದ ಎರಡು ಜಾತಿಗಳಿವೆ.

★ ಬಿಳಿಯ ವಿಷ್ಣುಕ್ರಾಂತಿಯ ಶೀತಲ, ಕಹಿ, ಬುದ್ಧಿವರ್ಧಕ, ಕಣ್ಣುಗಳಿಗೆ ಹಿತಕಾರಿ, ಭೇದಿಕಾರಿ, ವಿಷನಾಶಕ ಮತ್ತು ತ್ರಿದೋಷಗಳನ್ನು ಶಮನಗೊಳಿಸುತ್ತದೆ. ತಲೆಶೂಲೆ, ಕುಷ್ಠ, ದಾಹ, ಪಿತ್ತವಿಕಾರ, ಬಾವು, ಕ್ರಿಮಿರೋಗ, ವ್ರಣಗಳು, ಗ್ರಹಬಾಧೆ ಇವುಗಳನ್ನು ನಾಶಗೊಳಿಸುವುದಲ್ಲದೆ ಮಂಡಲದ ಹಾವಿನ ವಿಷವನ್ನೂ ನಿವಾರಣೆ ಮಾಡುತ್ತದೆ. ಇದರಲ್ಲಿ ಬಿಳಿಯ ಹೂವುಗಳೂ ಬಿಡುತ್ತವೆ.

★ ನೀಲವರ್ಣದ ವಿಷ್ಣುಕ್ರಾಂತಿಯು ಕಹಿ, ತ್ರಿದೋಷ ನಾಶಕ, ತಂಪಗುಣವುಳ್ಳದ್ದು, ಜ್ವರ, ದಾಹ, ಭ್ರಮೆ, ಪಿಶಾಚ ಬಾಧೆ, ರಕ್ತಭೇದಿ, ಹುಚ್ಚು, ಮಾದಕ ವಸ್ತುಗಳಿಂದುಂಟಾಗುವ ಬುದ್ಧಿಭ್ರಮಣೆ, ಕೆಮ್ಮು, ದಮ್ಮು, ಕ್ಷಯ ಇವುಗಳನ್ನು ದೂರ ಮಾಡುವುದಾಗಿದೆ. ಇವೆರಡರಲ್ಲಿ ಬಿಳಿಯದೇ ವಿಷಯ ನಿವಾರಣೆಗೆ ಹೆಚ್ಚಾಗಿ ಉಪಯೋಗಿಸಲ್ಪಡುತ್ತದೆ.

★ ಬಿಳಿಯ ವಿಷ್ಣುಕ್ರಾಂತಿ (ಬೇರುಸಹಿತ), ಅಶ್ವಗಂಧ, ದ್ರಾಕ್ಷಿ, ತುಲಸಿಯ ಎಲೆ, ಬೇಲದ ಎಲೆ, ಬಿಲ್ವಪತ್ರೆ, ದಾಳಿಂಬೆಯ ಎಲೆ, ಇವುಗಳನ್ನೆಲ್ಲಾ ಸಮವಾಗಿ ಒಟ್ಟುಗೂಡಿಸಿ ಅರೆದು ಜೇನುತುಪ್ಪದೊಡನೆ ಸೇವಿಸುವುದರಿಂದ ಮಂಡಲದ ಹಾವಿನ ವಿಷವು ಇಳಿಯುತ್ತದೆ. ಬಿಳಿಯದು ಸಿಗದ ಪಕ್ಷಕ್ಕೆ ನೀಲಿಯದನ್ನೇ ಉಪಯೋಗಿಸಿಕೊಳ್ಳಬಹುದು.

★ ವಿಷ್ಣುಕ್ರಾಂತಿಯ ೨ ತೊಲ ಬೇರನ್ನು, ೧ ತೊಲ ಶಿವಲಿಂಗದ ಬೀಜ (ಇದನ್ನು ಅನೇಕ ಜನರು ಲಿಂಗತೊಂಡೆ ಬೀಜವೆಂತಲೂ ಕರೆಯುತ್ತಾರೆ) ಗಳೊಡನೆ ಅರೆದು ಹಾಲಿನೊಡನೆ ೨೧ ದಿನಗಳವರೆಗೆ ಗರ್ಭಿಣಿಯಾದ ಸ್ತ್ರೀಯು ಕುಡಿಯುವುದಾದರೆ ಪುತ್ರನನ್ನೇ ಹಡೆಯುತ್ತಾಳೆಂದು ಅನೇಕ ಆಯುರ್ವೇದ ಗ್ರಂಥಗಳಲ್ಲಿ ಉಲ್ಲೇಖವಿರುತ್ತದೆ ಮತ್ತು ಉತ್ತರ ಭಾರತ ದೇಶದ ಅನೇಕ ಸುಪ್ರಸಿದ್ಧ ವೈದ್ಯರುಗಳು ಪರೀಕ್ಷಿಸಿ ಇಂತಹ ಪ್ರಯೋಗಗಳಲ್ಲಿ ಬಹುಮಟ್ಟಿಗೆ ಸತ್ಯಾಂಶವಿದೆಯೆಂದು ಹೇಳುತ್ತಾರೆ. ಅಥವಾ ಶಿವಲಿಂಗ ಪುಷ್ಪದ ಬೀಜಗಳನ್ನು ಒಂದೊಂದು ತೊಲದಂತೆ ಸಮಭಾಗದ ಬಿಳಿಯ ಜೀರಿಗೆಯೊಡನೆ ಅರೆದು ಹಾಲಿನಲ್ಲಿ ಕೂಡಿಸಿ, ಸ್ತ್ರೀಯರು ಋತುಸ್ನಾನವಾದ ನಂತರ ೨೧ ದಿನಗಳವರೆಗೆ ಕುಡಿಯುವುದರಿಂದ ಗರ್ಭವು ಅವಶ್ಯವಾಗಿ ನಿಲ್ಲುವುದೆಂತಲೂ ಹೇಳುತ್ತಾರೆ. ಸಂತಾನೋತ್ಪತ್ತಿಗೆ ಸಹಾಯಕಗಳಾದ ಇಂತಹ ನೂರಾರು ಪ್ರಯೋಗಗಳು ಆಯುರ್ವೇದ ಗ್ರಂಥಗಳಲ್ಲಿ ಹೇಳಲ್ಪಟ್ಟಿವೆ.

★ ಮಾಸಿಕ ಋತುಸ್ನಾನವಾದ ನಂತರ ೨ ತೊಲ ಅಶ್ವಗಂಧವನ್ನು ಕುಟ್ಟಿ ಚೂರ್ಣಿಸಿ ಹಾಲಿನಲ್ಲಿ ಹಾಕಿ ಕುದಿಸಿದ ನಂತರ ತುಪ್ಪ ಮತ್ತು ಸಕ್ಕರೆಯನ್ನು ಕೂಡಿಸಿ ಪ್ರಾತಃಕಾಲದಲ್ಲಿ

ಕುಡಿಯಬೇಕು. ಮತ್ತು ಅದೇ ರಾತ್ರಿಯಲ್ಲಿ ಪತಿಸಹವಾಸಮಾಡಿದರೆ ಅವಶ್ಯವಾಗಿ ಗರ್ಭಧಾರಣೆಯಾಗುತ್ತದೆ.

★ ನಸುಗುನ್ನಿಯ ಬೀಜ (ಈ ಗಿಡದ ಎಲೆಗಳು ಚರ್ಮಕ್ಕೆ ತಗುಲಿತ ಮಾತ್ರಕ್ಕೇ ಮೈಯಲ್ಲಿನವೆಯುಂಟಾಗುತ್ತದೆ. ಈ ಗಿಡಕ್ಕೆ ಸಂಸ್ಕೃತದಲ್ಲಿ ''ಆತ್ಮಗುಪ್ತಾ, ಕಪಿಕಚ್ಛೂ'' ಮುಂತಾದ ಹೆಸರುಗಳಿವೆ) ಮತ್ತು ಶಿವಲಿಂಗದ ಬೀಜ, ಬೇಲದ ಹಣ್ಣಿನ ತಿರುಳು ಇವುಗಳಲ್ಲಿ ಯಾವುದನ್ನಾದರೂ ಹಾಲಿನಲ್ಲಿ ಅರೆದು ಗರ್ಭವತಿಯು ೨೧ ದಿನಗಳವರೆಗೆ ಕುಡಿದರೆ ಖಂಡಿತವಾಗಿ ಪುತ್ರನನ್ನೇ ಹಡೆಯುವಳೆಂದು ಒಬ್ಬ ಪ್ರಸಿದ್ಧ ವೈದ್ಯರು ಹೇಳಿರುತ್ತಾರೆ.

★ ಎರಡು ತೊಲ ಅಶ್ವಗಂಧವನ್ನು (ಪಂಜಾಬಿನಿಂದ ಬರುವ ಅಶ್ವಗಂಧಕ್ಕೆ 'ಸೀಮೆ ಅಶ್ವಗಂಧ' ಅಥವಾ 'ನಾಗೌರಿ ಅಶ್ವಗಂಧ' ವೆಂದು ಹೇಳುತ್ತಾರೆ. ಇದು ಬಹಳ ಬೆಳ್ಳಗಿರುತ್ತದೆ, ಗುಣದಲ್ಲಿಯೂ ಶ್ರೇಷ್ಠವಾಗಿದೆ, ಇದನ್ನೇ ಉಪಯೋಗಿಸುವುದುತ್ತಮ) ಹಸುವಿನ ಹಾಲಿನಲ್ಲಿ ಅರೆದು ಚಟ್ನಿಯನ್ನು ಮಾಡಿಕೊಳ್ಳಬೇಕು. ಅನಂತರ ಆ ಚಟ್ನಿಯನ್ನು ಒಂದು ಪಾತ್ರೆಗೆ ಹಾಕಿ ಮೇಲೆ ೧ ಪಾವು ಹಸುವಿನ ಹಾಲನ್ನೂ ೧ ತೊಲ ಹಸುವಿನ ತುಪ್ಪವನ್ನೂ ಹಾಕಿ ಮಂದಾಗ್ನಿಯಿಂದ ಕಾಯಿಸಬೇಕು. ಚೆನ್ನಾಗಿ ಕಾಯ್ದ ನಂತರ ಬಟ್ಟೆಯಿಂದ ಶೋಧಿಸಿಕೊಂಡು ಸ್ತ್ರೀಯು ಮಾಸಿಕ ಋತುಸ್ನಾನವನ್ನು ಮಾಡಿದ ನಂತರ ಅದೇ ದಿನದ ಪ್ರಾತಃಕಾಲದಲ್ಲಿಯೇ ಕುಡಿಯಬೇಕು. ಆ ದಿನ ಕೇವಲ ಹಾಲು ಅನ್ನವನ್ನೇ ಭುಂಜಿಸಬೇಕು. ಆ ರಾತ್ರಿಯಲ್ಲಿ ಪತಿಸಹವಾಸವು ಆದರೆ ಖಂಡಿತವಾಗಿ ಗರ್ಭಧಾರಣೆಯಾಗುತ್ತದೆ. ಇದು ಶಾಸ್ತ್ರೋಕ್ತವಾದ ಪ್ರಯೋಗವು. ಇದರಂತೆ ಆಚರಿಸಿ ಅನೇಕರು ಸಫಲತೆಯನ್ನು ಪಡೆದಿರುತ್ತಾರೆ. ಆದರೆ ಇದನ್ನು ಸೇವಿಸತಕ್ಕ ಸ್ತ್ರೀಯಳಿಗೆ ಪ್ರದರ ಅಥವಾ ಗರ್ಭಾಶಯದ ಮತ್ತಾವ ದೋಷವೂ ಇರಕೂಡದು. ಹಾಗೇನಾದರೂ ಇದ್ದರೆ ಅದನ್ನು ನಿವಾರಿಸಿಕೊಂಡು ಇಂತಹ ಗರ್ಭಪ್ರದ ಪ್ರಯೋಗನ್ನು ಮಾಡಿಕೊಳ್ಳಬೇಕು. ಪ್ರದರ ಮುಂತಾದ ದೋಷಗಳೇ ಗರ್ಭಧಾರಣೆಗೆ ಅಡ್ಡಿಯಾಗಿರುತ್ತವೆ. ಅನೇಕರು ಈ ತತ್ವವನ್ನು ಅರಿಯದ ಸಂತಾನಕ್ಕಾಗಿ ಯಂತ್ರ ಮತ್ತು ಮಂತ್ರ, ನಾನಾ ದೇವತೆಗಳ ಹರಕೆ, ಮುಂತಾದ ಹೊರಗಿನ ಉಪಕರಣಗಳ ಹಿಂದೆಯೇ ಓಡಿ ಆರ್ಥಿಕ ಹಾನಿ ಜತೆಗೆ ಶಾರೀರಿಕ ಮತ್ತು ಮಾನಸಿಕ ವ್ಯಥೆಗಳಿಗೆ ಗುರಿಯಾಗುತ್ತಾರೆ !

★ ಯಾರೇ ಆಗಲಿ ಮೊದಲು ದಂಪತಿಗಳಾದ ತಮ್ಮಲ್ಲಿ ಶಾರೀರಿಕ ದೋಷಗಳಿದ್ದರೆ ಅವುಗಳನ್ನು ಕಳೆದುಕೊಂಡು, ಅನಂತರ ಅವಶ್ಯಕವಿದ್ದಲ್ಲಿ ಯಾವ ಹೊರಗಿನ ಉಪಾಯವನ್ನಾದರೂ ಹುಡುಕಿಕೊಳ್ಳಬಹುದು. ಈ ಮುಖ್ಯ ಕಾರ್ಯವನ್ನು ಬಿಟ್ಟು ಬಾಹ್ಯೋಪಕರಣಗಳಿಗೇ ಮರುಳಾಗತಕ್ಕವರು ಖಂಡಿತವಾಗಿ ಸಫಲತೆಯನ್ನು ಹೊಂದಲಾರರು. ಪ್ರತಿಯೊಂದು ಕಾರ್ಯದ ಸಾಧನೆಗೂ ಮುಖ್ಯವಾಗಿ ಪ್ರಯತ್ನವನ್ನು ಮಾಡಿದನಂತರ ಅದಕ್ಕೆ ವಿಘ್ನಗಳುಂಟಾಗದಿರುವುದಕ್ಕೆ ಬೇಕಾದರೆ ದೇವರ ಮತ್ತು ಮಹಾತ್ಮರ ಅನುಗ್ರಹ ಕೋರಬೇಕಾದುದೇ ಉತ್ತಮ ಮಾರ್ಗವಾಗಿದೆ. ಪ್ರತಿಯೊಂದು ಕಾರ್ಯವನ್ನೂ ದೇವರ ಪಾಲಿಗೇ ಬಿಟ್ಟುಬಿಟ್ಟರೆ ಕಾರ್ಯ ಸಾಧನೆಯಾಗುವುದು ಹೇಗೆ? ಈ ಮಾತು ನಮ್ಮ ಜೀವನದ ಪ್ರತಿಕ್ಷಣದಲ್ಲಿ ಜರುಗುವ ಪ್ರತಿಯೊಂದು ಕಾರ್ಯಕ್ಕೂ ಸಂಬಂಧಿಸಿರುವುದಾಗಿದೆ. ಪರಿಶೀಲಿಸಿದರೆ ಇದು ಎಲ್ಲರಿಗೂ ಗೊತ್ತಾಗುತ್ತದೆ.

★ ವಿಷ್ಣುಕ್ರಾಂತಿಯ ಬೇರು, ಅಶ್ವಗಂಧ, ಹಿಪ್ಪಲಿ, ಶುಂಠಿ, ಮೆಣಸು, ನಾಗಕೇಸರಿ ಇವುಗಳನ್ನು ಸಮಭಾಗವಾಗಿ ತಂದು ಕುಟ್ಟಿ ಶೋಧಿಸಿಕೊಳ್ಳಬೇಕು. ಇದರಲ್ಲಿ ಅರ್ಧತೊಲ ಚೂರ್ಣವನ್ನು ಹಸುವಿನ ತುಪ್ಪದೊಡನೆ ಕೂಡಿಸಿ ಸ್ತ್ರೀಯು ಮಾಸಿಕ ಋತುಸ್ನಾನದ ನಂತರ ಸೇವಿಸಬೇಕು. ಅದೇ ರಾತ್ರಿಯಲ್ಲಿ ಪತಿ ಸಹವಾಸಮಾಡಿದರೆ ಖಂಡಿತವಾಗಿ ಗರ್ಭಧಾರಣೆಯಾಗಿ ಪುತ್ರನೇ ಜನಿಸುವನೆಂದು ಡಿಲ್ಲಿಯ ಒಬ್ಬ ಪ್ರತಿಷ್ಠಿತ ವೈದ್ಯ ವಿದ್ವಾಂಸರು ಹೇಳಿರುತ್ತಾರೆ. ಆ ಪಂಡಿತರು ಸಂತಾನಾಭಿಲಾಷೆಯುಳ್ಳ ಅನೇಕ ಸ್ತ್ರೀಯರಿಗೆ ಮೊದಲು ಪ್ರದರ ಮತ್ತು ತಡೆದಿರುವ, ಅಥವಾ ಅಕ್ರಮದಿಂದಾಗುವ ಮಾಸಿಕ ಧರ್ಮದ ತೊಂದರೆಗಳನ್ನು ಹೋಗಲಾಡಿಸಿ ಅನಂತರ ಈ ಪ್ರಯೋಗವನ್ನು ಹೇಳುತ್ತಿದ್ದರು. ಅದರಂತೆಯೇ ಆಚರಿಸಿದವರಲ್ಲಿ ಶೇಕಡಾ ೫೦ ಜನರಿಗೆ ಸಫಲತೆಯು ದೊರೆತಿರುತ್ತದೆ.





★ ವಿಷ್ಣುಕ್ರಾಂತಿಯ ಬೇರು, ಬೇಲದ ಹಣ್ಣಿನ ತಿರುಳು ಮತ್ತು ಶಿವಲಿಂಗದ ಬೀಜ ಇವುಗಳನ್ನು ಸಮವಾಗಿ ತಂದು ಒಣಗಿಸಿ ಚೂರ್ಣವನ್ನು ಮಾಡಬೇಕು. ಮಾಸಿಕ ಸ್ನಾನವಾದ ನಂತರ ಅದೇ ದಿನ ಪ್ರಾತಃಕಾಲದಲ್ಲಿ ಈ ಚೂರ್ಣವನ್ನು ಹಾಲಿನೊಡನೆ ಸೇವಿಸಿದರೆ ಅವಶ್ಯವಾಗಿ ಗರ್ಭಧಾರಣೆಯಾಗುತ್ತದೆ.

★ ರಜೋದೋಷವಿಲ್ಲದ ಸ್ತ್ರೀಯಳು ವಿಷ್ಣುಕ್ರಾಂತಿಯ ಬೇರಿನ ಚೂರ್ಣ ಮತ್ತು ಅಶ್ವಗಂಧದ ಚೂರ್ಣ, ಈ ಎರಡು ಚೂರ್ಣಗಳನ್ನು ''ಬೆಳ್ಳಿಯ ಭಸ್ಮ''ದೊಡನೆ ಸೇರಿಸಿ ಹಸುವಿನ (ಕರುವಿರಬೇಕು) ಹಾಲಿನಲ್ಲಿ ಅರೆದು ಋತುಸ್ನಾನವಾದ ದಿನದಿಂದ ೭ ದಿನಗಳವರೆಗೆ ಸೇವಿಸಿದರೆ ಖಂಡಿತವಾಗಿ ಗರ್ಭಧಾರಣೆಯಾಗುತ್ತದೆ. ಯಾವ ತಂತ್ರ, ಮಂತ್ರ ಔಷಧಿಗಳಿಂದಲೂ ವಂಧ್ಯಾ ಸ್ತ್ರೀಯರಿಗೆ (ಹುಟ್ಟುಬಂಜೆಯ ರನ್ನು ಬಿಟ್ಟು) ಗರ್ಭಧಾರಣೆಯಾಗದಿದ್ದರೆ ಈ ಪ್ರಯೋಗದಿಂದ ಅವಶ್ಯವಾಗಿ ಗರ್ಭವು ನಿಲ್ಲುತ್ತದೆ. ಇದನ್ನು ಹರಿದ್ವಾರದಿಂದ ಕಾಶಿಗೆ ಬಂದಿದ್ದ ಒಬ್ಬ ಸಾಧುವು ಹೇಳಿದ್ದರು. ಬಂಜೆತನದಿಂದ ದುಃಖಿಸುತ್ತಿರುವ ನಮ್ಮ ದೇಶದ ಮಹಿಳೆಯರು ಈ ಪ್ರಯೋಗವನ್ನು ಪರೀಕ್ಷಿಸಬೇಕು. ವಂಧ್ಯಾ ಸ್ತ್ರೀಯರು ಇದನ್ನು ೩ ದಿನಗಳು ಮಾತ್ರ ಸೇವಿಸಿದರೆ ಸಾಕೆಂದು ಹೇಳಿರುತ್ತಾರೆ. ಆದಾಗ್ಯೂ ಪರೀಕ್ಷಿಸತಕ್ಕವರು ಋತುಸ್ನಾನವಾದ ನಂತರ ೭ ದಿನಗಳವರೆಗೆ ಸೇವಿಸುವುದುತ್ತಮ. ಬೆಳ್ಳಿಯ ಭಸ್ಮವನ್ನು ಮಾತ್ರ ಕಂಡ ಕಂಡವರಲ್ಲಿ ತೆಗೆದುಕೊಳ್ಳಬಾರದು. ಪ್ರಸಿದ್ಧವಾದ ಔಷಧಾಲಯದಲ್ಲಿ ಸಿಗುವ ಅಥವಾ ವಿಶ್ವಾಸಿಯಾದ ವೈದ್ಯನಿಂದ ಕ್ರಮವಾಗಿ ಮಾಡಲ್ಪಟ್ಟಿರುವ ಭಸ್ಮವನ್ನೇ ಸಂಗ್ರಹಿಸಬೇಕು. ಅಶುದ್ಧವಾದ ಭಸ್ಮವು ನಾನಾವಿಧ ಉಪದ್ರವಗಳನ್ನು ಉಂಟು ಮಾಡುತ್ತದೆ.

★ ಬಿಳಿಯ ಅಥವಾ ನೀಲಿಯ ವಿಷ್ಣುಕ್ರಾಂತಿಯ ಬೇರು, ನುಗ್ಗೆಯ ಸೊಪ್ಪು, ಸಾಸಿವೆ ಇವುಗಳನ್ನು ಗೋಮೂತ್ರದೊಡನೆ ಅರೆದು ಲೇಪಿಸುವುದರಿಂದ ಬಹುದಿನಗಳ ಗಂಡಮಾಲೆಯ ಗುಣವಾಗುತ್ತದೆ. ಹೊಟ್ಟೆಗೆ – ಕಂಚುವಾಳದ ಮರದ ಒಳಗಿನ ಚುಕ್ಕೆಯನ್ನು ತಂದು ಕುಟ್ಟಿ ಕಷಾಯವನ್ನು ಮಾಡಿಕೊಂಡು ಆ ಕಷಾಯಕ್ಕೆ ''ಶುಂಠಿ''ಯ ಚೂರ್ಣವನ್ನು ಕೂಡಿಸಿ ಕುಡಿಯಬೇಕು. ಇವೆರಡು ಪ್ರಯೋಗಗಳೂ ಸೇರಿದರೆ ಬಹುಬೇಗನೆ ಗಂಡಮಾಲೆ ಅಥವಾ ಗಲಗಂಡವು ಗುಣವಾಗುತ್ತದೆ. ಅಥವಾ ಕಂಚುವಾಳ ಮರದ ತೊಗಟೆಯನ್ನು ತಂದು ಅಕ್ಕಿಯನ್ನು ತೊಳೆದು ನೀರಿನಲ್ಲಿ ಅರೆದು ಶುಂಠಿಯ ಚೂರ್ಣವನ್ನು ಕೂಡಿಸಿ ಕುಡಿಯಬಹುದು. ಗಂಡಮಾಲೆ, ಪ್ಲೇಗಿನ ಗಡ್ಡೆ ಮತ್ತಿತರ ಎಲ್ಲಾ ವಿಧ ಗಡ್ಡೆಗಳಿಗೆ ಈ ಒಂದು ಅನುಭವಸಿದ್ಧವಾದ ಸುಲಭ ಚಿಕಿತ್ಸೆಯು ಪಾಠಕರ ಉಪಯೋಗಕ್ಕಾಗಿ ಇಲ್ಲಿ ಬರೆಯುವುದಾಗುತ್ತದೆ. ಬಹಳ ಪುಷ್ಟವಾಗಿ ಬೆಳೆದಿರುವ ಪಾಪಾಸುಕಳ್ಳಿಯನ್ನು ತಂದು ಹೆಡೆಯಂತಿರುವ ಭಾಗವನ್ನು ಸರಿಯಾಗಿ ಎರಡು ಹೋಳಾಗುವಂತೆ ಸೀಳಬೇಕು. ಅನಂತರ ಕಸ್ತೂರಿ ಅರಿಶಿನವನ್ನು ಕುಟ್ಟಿ ನೀರಿನೊಡನೆ ಬಹಳ ನುಣ್ಣಗೆ ಅರೆದ ಆ ಚಟ್ನಿಯನ್ನು ಕಳ್ಳಿಯ ಅರ್ಧದ ಒಳಭಾಗಕ್ಕೆ ದಪ್ಪವಾಗಿ ಹಚ್ಚಬೇಕು. ಅನಂತರ ಹೊಗೆಯಿಲ್ಲದ ಕೆಂಡದ ಮೇಲೆ ಇಟ್ಟು ತಳದ ಭಾಗವು ಬಿಸಿ ಬಂದು, ಮೇಲೆ ಬಳಿದಿರುವ ಚಟ್ನಿಯೂ ಬಿಸಿಯಾದ ಮೇಲೆ ಸ್ವಲ್ಪ ಆರಿಸಿ ಸಹನೆಯಾಗುವಷ್ಟುಸುಡುತ್ತಿರುವಾಗ ಆ ಕಳ್ಳಿಯನ್ನು ಗಡ್ಡೆಗಳಿಗೆ ಕಟ್ಟಬೇಕು. ಹೀಗೆ ೩-೩ ಅಥವಾ ೪-೪ ಗಂಟೆಗಳಿಗೊಮ್ಮೆ ಕಟ್ಟುತ್ತಿದ್ದರೆ ೨೪ ಗಂಟೆಗಳ ಅವಧಿಯಲ್ಲಿ ಗಡ್ಡೆಗಳು ಮೆತ್ತಗಾಗುವುದಲ್ಲದೆ ಎಂತಹ ತೀವ್ರ ಜ್ವರವಿದ್ದರೂ ಅದು ಖಂಡಿತ ಕಡಿಮೆಯಾಗುತ್ತದೆ. ಪ್ಲೇಗಿನ ರೋಗವು ಹರಡಿರುವಾಗ ಈ ಚಿಕಿತ್ಸೆಯನ್ನು ಗಡ್ಡೆ ಬಂದವರಿಗೆ ಅವಶ್ಯವಾಗಿ ಮಾಡಬೇಕು. ಈಶ್ವರನ ಕೃಪೆಯಿಂದ ಖಂಡಿತ ಗುಣವಾಗುತ್ತದೆ. ಕಾಶಿಯಲ್ಲಿ ಒಬ್ಬ ಮಹಾತ್ಮರು ನಾಲ್ಕಾರು ರೋಗಿಗಳಿಗೆ ಇದನ್ನು ಕಟ್ಟಿಸಿ ಗುಣಪಡಿಸಿರುತ್ತಾರೆ. ಇವೆಲ್ಲವೂ ಪರೀಕ್ಷಿಸಲ್ಪಟ್ಟಿವೆ.

★ ವಿಷ್ಣುಕ್ರಾಂತಿಯ ೨ ತೊಲ ಬೇರನ್ನು ತಂದು ಅರೆದು ಕಲ್ಲುಸಕ್ಕರೆ, ಜೇನುತುಪ್ಪಗಳನ್ನು ಕೂಡಿಸಿ ಪ್ರತಿದಿನದ ಪ್ರಾತಃಕಾಲದಲ್ಲಿ ೭ ದಿನಗಳವರೆಗೆ ಸೇವಿಸುತ್ತಿದ್ದರೆ, ಪರಿಣಾಮ ಶೂಲೆಯು (ಆಹಾರವು ಪಚನವಾಗುತ್ತಿರುವಾಗ ಬರುವ ಹೊಟ್ಟೆಶೂಲೆ) ಗುಣವಾಗುತ್ತದೆ. ○

> ಸತತ ಉದ್ಯೋಗಿಯಾದವನಿಗೆ ಬಡತನ ಅಥವಾ ದಾರಿದ್ರ್ಯದ ಛಾಯೆ ಎಂದೂ ಬರಲಾರದು. ಇದರಿಂದ ಸದಾ ಕರ್ಮಯೋಗಿಯಾಗಿರಬೇಕು.
>
> – ನೀತಿಶಾಸ್ತ್ರ

# ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗೆ ತೀತಾ ವಾಣಿ ವಿದ್ಯಾಸಂಸ್ಥೆಯ ಸೇರ್ಪಡೆ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ಚಿತ್ರದಲ್ಲಿ ಎಡದಿಂದ ಬಲಕ್ಕೆ : ಗ್ರಾಮಪಂಚಾಯಿತಿ ಉಪಾಧ್ಯಕ್ಷೆ ಶ್ರೀಮತಿ ಲಕ್ಷ್ಮೀದೇವಮ್ಮ, ಸದಸ್ಯೆ ಶ್ರೀಮತಿ ಸುಲೋಚನಮ್ಮ, ಪಂಚಾಯತಿ ಅಧ್ಯಕ್ಷ ಶ್ರೀ ಟಿ.ಕೆ. ಜಗದೀಶ್, ಶಾಲೆಯ ಸಂಸ್ಥಾಪಕ ಅಧ್ಯಕ್ಷ ಶ್ರೀ ಟಿ.ಆರ್. ಚನ್ನಪ್ಪ ಗ್ರಾಮಪಂಚಾಯಿತಿ ಸದಸ್ಯ ಶ್ರೀ ಸತ್ಯನಾರಾಯಣ ಹಾಗೂ ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಮಲ್ಲಿಕಾರ್ಜುನ ಅವರನ್ನು ಕಾಣಬಹುದು.

**ಜೂ**ನ್ ೨೬ರಂದು ಕೊರಟಗೆರೆ ತಾಲ್ಲೂಕು ತೀತಾ ಗ್ರಾಮದಲ್ಲಿ ಹಬ್ಬದ ವಾತಾವರಣ. ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದರ್ಶನ ಭಾಗ್ಯ ಪಡೆಯಲು ಸುತ್ತಮುತ್ತಲ ಗ್ರಾಮಗಳಿಂದ ಸಹಸ್ರಾರು ಗ್ರಾಮೀಣ ಬಂಧುಗಳು ಹಾಗೂ ಭಕ್ತರು ಆಗಮಿಸಿ ಪರಮಪೂಜ್ಯರಿಗೆ ಭಕ್ತಿಯಿಂದ ನಮಸ್ಕರಿಸಿ ಧನ್ಯತೆಯನ್ನು ಪಡೆದರು.

ಸಂದರ್ಭ : ತೀತಾದ ಶ್ರೀ ಟಿ.ಆರ್. ಚನ್ನಪ್ಪನವರು ೧೯೬೩ರಲ್ಲಿ ವಾಣಿ ವಿದ್ಯಾಸಂಸ್ಥೆಯನ್ನು ಸ್ಥಾಪಿಸಿ ಅದರ ಆಶ್ರಯದಲ್ಲಿ ಪ್ರೌಢಶಾಲೆಯನ್ನು ಪ್ರಾರಂಭಿಸಿ ಶಿಕ್ಷಣದಿಂದ ವಂಚಿತರಾಗುತ್ತಿದ್ದ ಸಾವಿರಾರು ಜನ ಗ್ರಾಮೀಣ



ಸಂಸ್ಥಾಪಕ ಅಧ್ಯಕ್ಷ ಶ್ರೀ ಟಿ.ಆರ್. ಚನ್ನಪ್ಪ ಮತ್ತು ಕುಟುಂಬದವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ







ಕಿಕ್ಕಿರಿದ ಅಭಿಮಾನಿ ಬಂಧುಗಳು

ಮಕ್ಕಳಿಗೆ ಶಿಕ್ಷಣ ದೊರೆಯುವಂತೆ ಮಾಡಿದರು. ಈ ಸಂಸ್ಥೆ ವರ್ಷದಿಂದ ವರ್ಷಕ್ಕೆ ಪ್ರಗತಿಯ ಹೆಜ್ಜೆಗಳನ್ನು ಇಡುತ್ತ ಒಂದು ಆದರ್ಶ ಪ್ರೌಢಶಾಲೆಯೆಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಆದರೆ ಕೆಲವು ಅನಿವಾರ್ಯ ಕಾರಣಗಳಿಂದ ಸಂಸ್ಥೆಯ ಆಡಳಿತ ಮಂಡಳಿಯು ಪ್ರೌಢಶಾಲೆಯನ್ನು ನಡೆಸಲು ಸಾಧ್ಯವಾಗದೆ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗೆ ವಹಿಸಿಕೊಡುವ ತೀರ್ಮಾನವನ್ನು ಕೈಗೊಂಡು; ಅದರಂತೆ ಪರಮಪೂಜ್ಯರಲ್ಲಿ ಬಿನ್ನವಿಸಿಕೊಂಡರು. ಸದಸ್ಯರ ಬಿನ್ನಹಕ್ಕೆ ಮಣಿದ ಪರಮಪೂಜ್ಯ ಶ್ರೀ ಶ್ರೀಗಳವರು ಜೂನ್ ೨೬ರಂದು ತೀತಾದಲ್ಲಿ ನಡೆದ ಭವ್ಯ ಸಮಾರಂಭದಲ್ಲಿ ಪ್ರೌಢಶಾಲೆಯ ಜವಾಬ್ದಾರಿಯನ್ನು ವಹಿಸಿಕೊಂಡರು.

ಸಮಾರಂಭಕ್ಕೆ ಮುನ್ನ ಪರಮಪೂಜ್ಯ ಶ್ರೀ ಶ್ರೀಗಳವನ್ನು ಪೂರ್ಣಕುಂಭಗಳಿಂದ ಮೆರವಣಿಗೆಯಲ್ಲಿ ವೇದಿಕೆಗೆ ಬರಮಾಡಿಕೊಳ್ಳಲಾಯಿತು.

# ಶ್ರೀ ಶ್ರೀ ಗುರುಮಲ್ಲೇಶ್ವರ ಸಂಸ್ಮರಣ ವಾರ್ಷಿಕ ಆರಾಧನೆ




ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

## ರಾಯರ ಕೊಪ್ಪಲಿನಲ್ಲಿ ಬಸವ ಜಯಂತಿ ಕಾರ್ಯಕ್ರಮ




ಚಿತ್ರದಲ್ಲಿ ಎಡದಿಂದ ಬಲಕ್ಕೆ : ಕಲ್ಮಠದ ಶ್ರೀ ಶ್ರೀ ಮಹಾಂತ ಸ್ವಾಮಿಗಳು, ಕೆರೆಕೋಡ್ಲಿ ಮಠದ ಶ್ರೀ ಶ್ರೀ ಸದಾಶಿವ ಸ್ವಾಮಿಗಳು, ಆದಿಚುಂಚನಗಿರಿ ಶಾಖಾ ಮಠದ ಶ್ರೀ ಶ್ರೀ ಪ್ರಣವಾನಂದ ಸ್ವಾಮಿಗಳು, ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹಾಗೂ ಶಾಸಕರಾದ ಶ್ರೀ ಬಿ.ಬಿ. ಶಿವಪ್ಪನವರನ್ನು ಕಾಣಬಹುದು.



ಪರಮಪೂಜ್ಯ ಶ್ರೀ ಶ್ರೀಗಳವರನ್ನು
ಹರಗುರು ಚರಮೂರ್ತಿಗಳು ಹಾಗೂ
ಭಕ್ತರು ವೇದಿಕೆಗೆ
ಬರಮಾಡಿಕೊಳ್ಳುತ್ತಿರುವುದು





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೨೬. | ಅಧ್ಯಕ್ಷರು<br>ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ<br>ಸಹಕಾರ ಸಂಘ ನಿಯಮಿತ<br>ಶ್ರೀ ಸಿದ್ಧಗಂಗಾಮಠ,<br>ತುಮಕೂರು – ೪. | ೫,೫೫೫.೦೦ |
| ೪೨೭. | ಶ್ರೀ ಎಂ.ಬಿ. ಕುಮಾರಸ್ವಾಮಿ<br>ಬಿನ್ : ಬಸವರಾಜಯ್ಯ, ಶಿಕ್ಷಕರು<br>ಮಾವುಕೆರೆ, ದೇವಾಲಾಪುರ ಅಂಚೆ,<br>ತುಮಕೂರು ತಾಲ್ಲೂಕು | ೧,೦೦೧.೦೦<br>(೧ನೇ ಕಂತು) |
| ೪೨೮. | ಶ್ರೀ ಸೋಮಶೇಖರಯ್ಯ, ಬಿ.ಡಿ.ಓ.,<br>ನಂ. ೧೧೪೩/೧೨, ೭ನೇ ಮುಖ್ಯರಸ್ತೆ,<br>ಸಾರ್ವಜನಿಕ ಹಾಸ್ಟೆಲ್ ರಸ್ತೆ, ವಿದ್ಯಾರಣ್ಯಪುರ<br>ಮೈಸೂರು. | ೨,೦೦೧.೦೦ |
| ೪೨೯. | ಶ್ರೀ ಜೆ. ಎಂ. ಮಲ್ಲಿನಾಥಯ್ಯ<br>ನಂ. ೩೧೩/೨, ಪೆವಿಲಿಯನ್ ರಸ್ತೆ,<br>ಪಿ.ಟಿ. ಬಡಾವಣೆ,<br>ದಾವಣಗೆರೆ – ೫೭೭ ೦೦೨ | ೨,೦೦೦.೦೦ |
| ೪೩೦. | ಮೆ : ಶ್ರೀ ಸಿದ್ಧಗಂಗಾ ಟ್ರೇಡಿಂಗ್ ಕಂಪನಿ<br>ಜನರಲ್ ಮರ್ಚೆಂಟ್ ಮತ್ತು ಕಮೀಷನರ್ ಏಜೆಂಟ್<br>ಎಪಿಎಂಸಿ, ಯಾರ್ಡ್<br>ಗಜೇಂದ್ರಗಡ್ – ೫೮೨೧೧೪. | ೧,೦೦೦.೦೦<br>(೨ನೇ ಕಂತು) |
| ೪೩೧. | ಶ್ರೀ ಎಂ. ಬಸವರಾಜು<br>ನಂ. ೬೧೮, ಆರ್‌ಬಿಐ ಬಡಾವಣೆ<br>ಜೆ.ಪಿ. ನಗರ, ೭ನೇ ಫೇಸ್<br>ಬೆಂಗಳೂರು . | ೨,೦೦೧.೦೦ |
| ೪೩೨. | ಶ್ರೀ ಪ್ರಕಾಶ್‌ಬಾಬು<br>ನಂ. ೬೪೪೯, ಎನ್. ಲಿವ್,<br>ಓಕ್ ಸಿ.ಟಿ. ಪಿಯೋರಿಯಾ<br>ಇಲಿನಾಯ್ಸ್ – ೬೧೪೧೫,<br>ಯು.ಎಸ್.ಎ. | ೩,೦೦೦.೦೦ |
| ೪೩೩. | ಶ್ರೀಮತಿ ಜಿ.ಆರ್. ವೀರಮ್ಮ,<br>ಕೋಂ. ಡಿ. ರೇವಣಸಿದ್ದಯ್ಯ<br>ನಂ. ೯೬೦, ೪ನೇ ಬ್ಲಾಕ್ ರಾಜಾಜಿನಗರ<br>ಬೆಂಗಳೂರು – ೫೬೦ ೦೧೦. | ೨,೨೫೦.೦೦ |
| ೪೩೪. | ಶ್ರೀ ಕೆ.ಎಲ್. ಸಿದ್ಧಲಿಂಗಯ್ಯ<br>ನಂ. ೧೭೫, ೭ನೇ 'ಬಿ' ಮುಖ್ಯರಸ್ತೆ,<br>ಆರ್.ಪಿ.ಸಿ. ಬಡಾವಣೆ,<br>ಬೆಂಗಳೂರು – ೫೬೦ ೦೪೦. | ೨,೦೦೧.೦೦ |
| ೪೩೫. | ಶ್ರೀ ಕೆ.ಎಸ್. ರವಿಶಂಕರ್<br>ನಂ. ೧೭೫, ೭ನೇ 'ಬಿ' ಮುಖ್ಯರಸ್ತೆ,<br>ಆರ್.ಪಿ.ಸಿ. ಬಡಾವಣೆ<br>ಬೆಂಗಳೂರು – ೫೬೦ ೦೪೦. | ೨,೦೦೦.೦೦ |
| ೪೩೬ | ಶ್ರೀ ಸಿ.ಎಂ. ಸ್ವಾಮಿ<br>ಕಾಮನಹಳ್ಳಿ, ಶುಕ್ರವಾರಸಂತೆ ಅಂಚೆ<br>ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೪೩೭. | ಶ್ರೀ ಲಿಂಗದೇವರಪ್ಪ<br>ಕಂಟ್ರಾಕ್ಟರ್,<br>ನಂ. ೬೨೭, ೧೦ನೇ 'ಜಿ' ಮುಖ್ಯರಸ್ತೆ,<br>೬ನೇ ಬ್ಲಾಕ್, ರಾಜಾಜಿನಗರ<br>ಬೆಂಗಳೂರು – ೫೬೦ ೦೧೦. | ೨,೦೦೧.೦೦ |
| ೪೩೮. | ಶ್ರೀ ಚಿಕ್ಕವೀರಯ್ಯ<br>ರಘುವನಹಳ್ಳಿ, ತಲಘಟ್ಟಪುರ ಅಂಚೆ,<br>ಕನಕಪುರ ರಸ್ತೆ, ಬೆಂಗಳೂರು – ೬೨. | ೨,೦೦೧.೦೦ |
| ೪೩೯. | ಶ್ರೀ ನೀಲಕಂಠಯ್ಯ<br>ನಿವೃತ್ತ ಶಿಕ್ಷಕರು, ಅರಳಗುಪ್ಪೆ ಮತ್ತು ಅಂಚೆ,<br>ತಿಪಟೂರು ತಾಲ್ಲೂಕು<br>ತುಮಕೂರು ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೪೪೦. | ಶ್ರೀ ಚಂದ್ರಶೇಖರ್ ಸೌಭಾಗ್ಯಲಕ್ಷ್ಮಿ<br>ದಬ್ಬೇಘಟ್ಟ ಆಟ್ ಅಂಡ್ ಪೋಸ್ಟ್<br>ದೊಡ್ಡೇರಿ ಹೋಬಳಿ, ಮಧುಗಿರಿ ತಾಲ್ಲೂಕು<br>ತುಮಕೂರು ಜಿಲ್ಲೆ. | ೧,೦೦೫.೦೦<br>(೧ನೇ ಕಂತು) |

(ಮುಂದುವರಿಯುತ್ತದೆ)

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೦೫. | ಶ್ರೀ ಹೆಚ್.ಡಿ. ಚಂದ್ರಯ್ಯ<br>ದೈಹಿಕ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಪದವಿ ಪೂರ್ವ ಕಾಲೇಜು<br>ಹಾಲನೂರು, ತುಮಕೂರು ತಾ॥ | ೧,೦೦೧.೦೦ |
| ೩೦೬. | ಶ್ರೀ ಶಿವಣ್ಣ ಮತ್ತು ಶ್ರೀಮತಿ ಶಿವಮ್ಮ ಮತ್ತು ಮಕ್ಕಳು<br>ದಾಸೇನಹಳ್ಳಿ, ನಿಡವಂದ ಅಂಚೆ<br>ನೆಲಮಂಗಲ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | ೨,೫೦೧.೦೦ |
| ೩೦೭. | ಶ್ರೀ ಕೆ. ಸಿದ್ಧಗಂಗಯ್ಯ<br>ನಿವೃತ್ತ ಪ್ರಾಂಶುಪಾಲರು<br>ನಂ. ೯೫೯, ೨ನೇ ಮುಖ್ಯರಸ್ತೆ ೪ನೇ ಕ್ರಾಸ್<br>ಜಯನಗರ<br>ಬೆಂಗಳೂರು-೫೬೦ ೦೬೯. | ೧,೦೦೧.೦೦ |
| ೩೦೮. | ಶ್ರೀ ಎನ್.ವಿ. ಕೃಷ್ಣಮೂರ್ತಿ<br>ನಂ. ೫೭/೫೦, ೧ನೇ ಕ್ರಾಸ್<br>೨೦ನೇ ಮುಖ್ಯರಸ್ತೆ, ವಿಜಯನಗರ<br>ಬೆಂಗಳೂರು-೪೦. | ೧,೦೦೧.೦೦ |
| ೩೦೯. | ಶ್ರೀ ಬಿ.ಎಲ್. ಚಂದ್ರಶೇಖರಯ್ಯ<br>ಮುಖ್ಯ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೧೦. | ಶ್ರೀ ಕೆ.ಆರ್. ವೀರಭದ್ರಯ್ಯ<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೧೧. | ಶ್ರೀ ದೊಡ್ಡನಾಗಯ್ಯ<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೧೨. | ಶ್ರೀ ರಮೇಶ್ ಟಿ. ಹರಿಜನ್<br>ಸಹ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೧೩. | ಶ್ರೀ ಎಂ. ಶಾಂತಕುಮಾರ<br>ವೃತ್ತಿ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೧೪. | ಶ್ರೀ ಡಿ.ಬಿ. ರುದ್ರಪ್ಪ<br>ಸಂಗೀತ ಶಿಕ್ಷಕರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಕ್ಷೇತ್ರ<br>ತುಮಕೂರು ತಾಲ್ಲೂಕು | ೧,೦೦೧.೦೦ |
| ೩೧೫. | ಶ್ರೀ ಸಂಜೀವ ಫಕೀರಪ್ಪ ಕೇರದಾಳ<br>ವೃತ್ತಿ ಶಿಕ್ಷಕರು ಶ್ರೀ ಸಿದ್ಧಗಂಗಾ ಅಂಧಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧೦೦೧.೦೦ |
| ೩೧೬. | ಕೆ.ಎಂ. ಶಿವಕುಮಾರ ಸ್ವಾಮಿ<br>"ಡಿ" ಗ್ರೂಪ್ ನೌಕರರು<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಶಾಲೆ<br>ಶ್ರೀ ಸಿದ್ಧಗಂಗಾ ಮಠ<br>ತುಮಕೂರು ತಾಲ್ಲೂಕು | ೧,೦೦೧.೦೦ |

(ಮುಂದುವರಿಯುತ್ತದೆ)





ಕಡಿಮೆ ಹಣ ಖರ್ಚುಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತ ವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

'ಕಸ್ತೂರಿ' ನೀಲಂ ಬಾರ್ ಸೋಪ್

'ಕಸ್ತೂರಿ' ನೀಲಂ ಬಾರ್ ಸೋಪ್

ರಾಮಕೃಷ್ಣ ಆಯಿಲ್ ಮಿಲ್, ತುಮಕೂರು

ಆರಾಧ್ಯ ಅಂಡ್ ಆರಾಧ್ಯ ಬಿಲ್ಡರ್ಸ್ ಪ್ರೈ. ಲಿಮಿಟೆಡ್

21/2, ಆರಾಧ್ಯ ಕಾಂಪ್ಲೆಕ್ಸ್,
ವಾಣಿವಿಲಾಸ ರಸ್ತೆ,
ಬೆಂಗಳೂರು-560 004.

ದೂರವಾಣಿ :
ಕಛೇರಿ : 623773
ಮನೆ : 262455

ಸ್ಥಾಪನೆ : 1995 ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ ದೂರವಾಣಿ : 77267

## ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ. ಹೆಚ್. ರಸ್ತೆ, ತುಮಕೂರು - 572102

**ಪ್ರಗತಿ ನೋಟ (31-3-2000 ರಲ್ಲಿದ್ದಂತೆ)**

(ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಷೇರು ಬಂಡವಾಳ | 75.70 | ದುಡಿಯುವ ಬಂಡವಾಳ | 1441.99 |
| ಕಾಯ್ದಿರಿಸದ ನಿಧಿಗಳು | 44.89 | ಸಾಲಗಳು ಮತ್ತು ಮುಂಗಡ | 969.78 |
| ಠೇವಣಿಗಳು | 1321.40 | | |

ಅಧ್ಯಕ್ಷರು : ಶ್ರೀ ಟಿ. ಕೆ. ನಂಜುಂಡಪ್ಪ

ಉಪಾಧ್ಯಕ್ಷರು : ಶ್ರೀ ಕೆ. ಎಸ್. ಶಂಕರಯ್ಯ

**ನಿರ್ದೇಶಕ ಮಂಡಲಿ**

ಶ್ರೀ ಪಿ.ಎಸ್. ಪುಟ್ಟಶಂಕರಯ್ಯ
ವಿದ್ವಾನ್ ಕೆ.ಎಸ್. ಶಿವನಂಜಯ್ಯ
ಶ್ರೀ ಜಿ.ಆರ್. ಶಿವಕುಮಾರ್
ಶ್ರೀ ಸಿ.ಎಸ್. ರಾಮದಾಸ್
ಶ್ರೀ ಜಿ. ಲಿಂಗಣ್ಣ
ಶ್ರೀ ವಿ.ಸಿ. ಉಮೇಶ್‌ಚಂದ್ರ
ಶ್ರೀ ಎಸ್. ರಾಜಣ್ಣ
ಶ್ರೀ ಹೆಚ್.ಡಿ. ಸೋಮಶೇಖರ್
ಶ್ರೀ ಎಂ.ಪಿ. ಸದಾಶಿವಯ್ಯ
ಶ್ರೀಮತಿ ಶಿವಲಿಂಗಮ್ಮ
ಶ್ರೀ ಲಕ್ಷ್ಮಯ್ಯ

ಪ್ರಭಾರ ವ್ಯವಸ್ಥಾಪಕರು : ಕು|| ಬಬೀತ



*ಹಾರ್ದಿಕ ಶುಭಾಶಯಗಳೊಂದಿಗೆ*

(ಸ್ಥಾಪನೆ : 1982)

## ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1320 |
| ಷೇರು ಮೊಬಲಗು | : | ರೂ. 26,36,500.00 |
| ವಾರ್ಷಿಕ ವಹಿವಾಟು | : | ರೂ. 3 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 11% |
| | : | 1 ವರ್ಷದಿಂದ 3 ವರ್ಷಕ್ಕೆ 12% |
| | : | 3 ವರ್ಷದಿಂದ 5 ವರ್ಷಕ್ಕೆ 13% |
| | : | 5 ವರ್ಷಕ್ಕೆ ಮೇಲ್ಪಟ್ಟು 14% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 1,00,000.00 ಗಳವರೆಗೆ |

ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ
ಅಧ್ಯಕ್ಷರು

ಡಾ|| ಶಿವಕುಮಾರಯ್ಯ
ಉಪಾಧ್ಯಕ್ಷರು





# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಆಡಳಿತ ಕಛೇರಿ :
ನಂ. 1732/32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ,
ವಿಜಯನಗರ, ಬೆಂಗಳೂರು-560 040.
✆ : 3358017, 3307070

ಮುಖ್ಯ ಶಾಖೆ :
ನಂ.1, ಅಕ್ಕಿಪೇಟೆ, ಬೆಂಗಳೂರು - 53.
✆ : 2871003, 2282224,

**ಗಣಕೀಕೃತ ಶಾಖೆಗಳು :**

ನಂ. 265/ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ✆ : 6541983
ನಂ. 395/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ✆ : 3402145
ನಂ. 1732/32, ಎಂ.ಸಿ. ರಸ್ತೆ, ಎಂ.ಸಿ. ಬಡಾವಣೆ, ವಿಜಯನಗರ, ಬೆಂಗಳೂರು-560 040. ✆ : 3307070, 3358017,
ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ✆ : 3485393.

- ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
- ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.
- ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

*(31-03-2001ಕ್ಕೆ) (ಲಕ್ಷ ರೂ.ಗಳಲ್ಲಿ)*

| | | | |
|---|---|---|---|
| ಷೇರು ಬಂಡವಾಳ | : 223.22 | ಸಾಲಗಳು ಮತ್ತು ಮುಂಗಡ | : 4509.92 |
| ಕಾಯ್ದಿಟ್ಟ ಹಾಗೂ ಇತರೆ ನಿಧಿಗಳು | : 310.36 | ಹೂಡಿಕೆಗಳು | : 2325.48 |
| ಠೇವಣಿಗಳು | : 6901.77 | ದುಡಿಯುವ ಬಂಡವಾಳ | : 7435.45 |

**ಕಾರ್ಯಕಾರಿ ಮಂಡಳಿ**

ಶ್ರೀ ಆರ್. ನೀಲಕಂಠಯ್ಯ
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಎಸ್. ಪರಮಶಿವಯ್ಯ, ಎಂ.ಎ.,
ಶ್ರೀ ವೈ.ಟಿ. ಮಹಾದೇವಪ್ಪ
ಶ್ರೀ ಬಿ.ಜಿ. ನಾಗಬಸಪ್ಪ
ಡಾ. ಮಲ್ಲಿಕಾರ್ಜುನ್, ಎಂ.ಎ., ಪಿ.ಎಚ್.ಡಿ.
ಶ್ರೀ. ಜಿ. ಶಿವಕುಮಾರ್, ಡಿ.ಎಂ.ಇ.
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ, ಎಂ.ಎ.
ಶ್ರೀ ಆರ್.ಜಿ. ಶಿವಕುಮಾರ್
ಶ್ರೀ ಬಿ.ಎಸ್. ಬಾಲರಾಜ್, ಬಿ.ಎಸ್ಸಿ, ಟೆಕ್ಸ್‌ಟೈಲ್ಸ್
ಶ್ರೀ ಎನ್.ಎಸ್. ಶಿವಶಂಕರ್
ಶ್ರೀ ಕೆ.ಆರ್. ರಾಮಯ್ಯ, ಎಂ.ಎ., ಬಿ.ಇಡಿ.,
ಶ್ರೀಮತಿ ಜಿ.ಎನ್. ಚಂದ್ರಾವತಿ ಬಿ.ಟಿ. ಉಮೇಶ್

ಪ್ರಧಾನ ವ್ಯವಸ್ಥಾಪಕರು
ಶ್ರೀ ಬಿ.ವಿ. ನಾಗರಾಜ, ಬಿ.ಕಾಂ., ಡಿ.ಸಿ.ಬಿ.,

